# ನನ್ನ ಅತ್ತಿಗೆ

(ಒಂದು ಹೊಸಮಾದರಿಯ ನೀಳ್ಗತೆ)

ಬರೆಹಗಾರ — ಭಾರತೀಸುತ.

# My Sister-in-law.

[A Social Novel]

by

**Bharatisuta**

ಅಗಷ್ಟ 1938

ಬೆಲೆ ೬ ಆಣೆ

# ಬರಹಗಾರನ ಬಿನ್ನಹಗಳು

ಕನ್ನಡಿಗ ಬಾಂಧವರೆ!

ಇದೊಂದು ಪುಟ್ಟಪುಸ್ತಕವನ್ನು ತಮ್ಮಗಳ ಮುಂದೆ ಸಮರ್ಪಿಸಲು ನಾನು ಸಂತೋಷಪಡುವೆನು. ನಾನು ಹೆಚ್ಚಿನ ಉದ್ದೇಶವನ್ನು ಪ್ರಚುರಿಸಲು ಈ ಕತೆಯಲ್ಲಿ ಯತ್ನಿಸಿರುವುದಿಲ್ಲ ಜೀವನದ ಯಥಾರ್ಥ ಚಿತ್ರವನ್ನು ಬರೆಯಲು ಪ್ರಯತ್ನಿಸಿರುವೆನು. ಆ ಪ್ರಯತ್ನವು ಸಫಲವಾಗಿದೆಯೇ ಹೇಗೆಂಬುದನ್ನು ನಿರ್ಧರಿಸುವ ಭಾರವು ವಾಚಕರದು.

ಸಾಹಸ ಕಾರ್ಯಗಳನ್ನಾಗಲಿ, ಅದ್ಭುತ ಉದ್ಯಮಗಳನ್ನಾಗಲಿ ನಿರೂಪಿಸಲು ಇಲ್ಲಿ ನಾನು ಪ್ರಯತ್ನಿಸಿಲ್ಲ ಒಂದು ಕುಟುಂಬದ, ಒಂದು ವ್ಯಕ್ತಿಯ ಜೀವನವನ್ನು ಕೇಂದ್ರೀಕರಿಸಿ, ಆ ಕುಟುಂಬದಲ್ಲಿ ನಡೆಯುತ್ತಿರುವ ಸಂಭವಗಳನ್ನು ಕುರಿತು ನಿರೂಪಿಸಲು ನನ್ನ ಪೇನಾದ ಶಾಯಿಯನ್ನು ಉಪಯೋಗಿಸಿರುವೆನು. ಶೀನುವಿನಂಥ ಸಹಸ್ರಾರು ಮಂದಿ ಯುವಕರು ನಮ್ಮ ಕನ್ನಡ ನಾಡಿನಲ್ಲಿರುವರು ಶೀನುವಿನಂತೆ ಬಾಲ್ಯಕಾಲದಲ್ಲಿ ತುಂಟತನವನ್ನು ನಡೆಯಿಸಿದ ಬಾಲಕರೂ ಇರುವರು. ಆದುದರಿಂದ ಶೀನುವಿನ ಜೀವನದ ಕತೆಯಲ್ಲಿ ಬರೆದ ಸಂಭವಗಳನ್ನು ವಾಚಿಸಿದ ನಂತರ ಓದುಗರು ತಮ್ಮ ಬಾಲ್ಯವನ್ನು ನೆನಪಿಗೆ ತಂದುಕೊಳ್ಳಲಿ. ಆಗ ವಾಸ್ತವವು ಹೊಳೆಯುವುದು.

ನನ್ನ ಈ ಬಡಲೇಖನಿಗೆ ಪರಿಚಯವಿಲ್ಲ, ರಚನಾಕೌಶಲ್ಯವಿಲ್ಲ. ಕನ್ನಡದ ಉದ್ದಾಮ ಸಾಹಿತಿಗಳ ಚರಣಗಳ ಧೂಳಿಯನ್ನು ಶಿರಸ್ಸಿನಲ್ಲಿ ಧರಿಸಲು ಯೋಗ್ಯನು ನಾನಲ್ಲ; ಆದರೂ ಹಿರಿಯರ ಆಶೀರ್ವಾದಗಳಿಂದಲೂ, ಕಿರಿಯರ ಪ್ರೋತ್ಸಾಹಗಳಿಂದಲೂ, ನನ್ನ ಈ ಬಡಲೇಖನಿಯು ಶಕ್ತಿಯನ್ನು ಪಡೆಯಬಹುದೆಂದು ನನ್ನ ನಂಬಿಕೆಯಾಗಿದೆ.

ಇದು ಕನ್ನಡಮ್ಮನ ಚರಣದಾವರೆಗಳಲ್ಲಿ ಆಕೆಯ ಬಾಲಕನು ಅರ್ಪಿಸುವ ಒಂದು ಹೂ ಆಗಿದೆ. ಈ ಕುಸುಮವನ್ನು ಸ್ವೀಕರಿಸಿ, ಆ ಒಲವಿನ ತಾಯಿಯು ತನ್ನ ಕಂದನಿಗೆ ಬಲದಾನ ಮಾಡಬೇಕೆಂದು ತಾಯಿಯ ಚರಣಗಳಲ್ಲಿ ಪ್ರಾರ್ಥಿಸುತ್ತೇನೆ.

ಪಯನಾಡು,
ತಾ|| ೨೯-೭-೧೯೩೮

ಕನ್ನಡಿಗರ ವಿನೀತ ದಾಸ,
"ಭಾರತೀ-ಸುತ"



# ಅಮಾತ್ಯನಂದಿನಿ

ಈ ಪುಸ್ತಕದ ಲೇಖಕರಿಂದಲೇ ಬರೆಯಲ್ಪಟ್ಟ ಚಂದ್ರಹಾಸನಿಗೆ ಸಂಬಂಧಿಸಿದ ಸುವಿಚಾರಗಳಿಂದ ಪರಿಪ್ಲುತವಾದ ರಮ್ಯ ಕಾದಂಬರಿ.

ಪುಟ ೩೨೮ ಬೆಲೆ ರೂ. ೧-೮-೦

**ದೊರೆಯುವ ಸ್ಥಳ:—**

ಭಿ. ಪ. ಕಾಳೆ, ಆನಂದವನ, ಡಿ. ಧಾರವಾಡ

# ನನ್ನ ಅತ್ತಿಗೆ. My Sister-in-law.

ಸಾಮಾಜಿಕ ಕಾದಂಬರಿ (A Social Novel)

## (೧)

ನನ್ನ ಬಾಲ್ಯದಲ್ಲಿಯೇ ನನ್ನ ತಾಯಿ-ತಂದೆಗಳು ತಮ್ಮ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸಿ ಚಿರಶಾಂತಿಯನ್ನು ಪಡೆದರು. ನನಗೆ ತಾಯಿಯ ನೆನಪೇ ಇಲ್ಲ. ನಾನು ಭೂಮಿಗೆ ಬಂದ ನಂತರ ಕೆಲವು ತಾಸುಗಳಲ್ಲಿಯೇ ಆಕೆಯ ಆತ್ಮವು ದೀರ್ಘ ವಿಶ್ರಾಂತಿಯನ್ನು ಪಡೆಯಲಿಕ್ಕಾಗಿ ಜಡದೇಹವನ್ನು ತ್ಯಜಿಸಿತಂತೆ. ನನ್ನ ಜನ್ಮವು ನನ್ನ ಜನನಿಯ ದೇಹವಿಯೋಗಕ್ಕೆ ಕಾರಣೀಭೂತವಾಯಿತೆಂದು ಜನರಾಡಿಕೊಳ್ಳುತ್ತಲಿದ್ದರು. ಮಾತೃಸ್ತನ್ಯಪಾನದ, ಮಾತೃ ಹಸ್ತಗಳಿಂದ ಲಾಲನೆ-ಪಾಲನೆಗಳ ಸುಖವನ್ನು ಆಸ್ವಾದಿಸುವ ಭಾಗ್ಯವನ್ನು ಆ ಹಾಳು ವಿಧಾತನು ನನ್ನ ಹಣೆಯಲ್ಲಿ ಬರೆಯಲಿಲ್ಲ. ಮಾತೃಪ್ರೇಮದ ಸವಿಯು ನನಗರಿಯದು.

ಹಲವು ಸಾರೆ ನನ್ನ ಜೊತೆಯ ಬಾಲಕರು ತಮ್ಮ ಜನನಿಯರ ಮಡಿಯಲ್ಲಿ ಕುಳಿತು, "ಅಮ್ಮಾ" ಎಂದು ನುಡಿಯುತ್ತ ತಮ್ಮ ತಾಯಿಯಂದಿರ ಕಂಠಗಳನ್ನು ಬಿಗಿದಪ್ಪುವ ಚಿತ್ರವು ನನ್ನ ಎದೆಯನ್ನು ಸೀಳುತ್ತಲಿದ್ದಿತು. ನನ್ನ ತಾಯಿಯು ಜೀವದಿಂದಿದ್ದರೆ, ನಾನೂ ನನ್ನ ಅಮ್ಮನ ಜೊತೆಯಲ್ಲಿ ಕುಳಿತು ಅವಳ ಕತ್ತನ್ನು ಬಿಗಿದಪ್ಪಬಹುದಾಗಿದ್ದಿತೆಂದು ಮನಸ್ಸಿನಲ್ಲಿಯೇ ವಿಚಾರಿಸಿಕೊಳ್ಳುತ್ತಲಿದ್ದೆನು; ಆದರೆ ನನಗೆ ಜನನಿಯಿಲ್ಲ; ನನ್ನ ಎದೆಯಲ್ಲಿ ಉಕ್ಕಿಬರುತ್ತಿರುವ ವ್ಯಸನವನ್ನು ಸಹಿಸಲಾರದೆ, ನಾನು ನನ್ನ ಪುಟ್ಟ ಹಾಸಿಗೆಯಲ್ಲಿ ಮಲಗಿ, ಹಾಸಿಗೆಯನ್ನು ಬಾಷ್ಪಜಲದಿಂದ ನೆನೆಯಿಸುತ್ತಲಿದ್ದೆನು. ನನ್ನ ಶೋಕದಲ್ಲಿ ಅನುತಾಪವನ್ನು ಪ್ರದರ್ಶಿಸುವವರು ಯಾರೂ ಇರಲಿಲ್ಲವೆಂದೇ ಹೇಳಬಹುದು.

ಅನೇಕ ತಾಸುಗಳ ವರೆಗೆ ನಾನು ಹಾಸಿಗೆಯಲ್ಲಿ ಉರುಳಾಡುತ್ತ ಮರುಗುತ್ತಲಿದ್ದೆನು. ಹಲವು ಸಾರೆ ನನ್ನ ಅಣ್ಣನು ಬಂದು ನನ್ನನ್ನು ಎತ್ತಿಕೊಂಡು "ಶೀನೂ! ಏಕಪ್ಪಾ ಅಳುತ್ತೀ?" ಎಂದು ನುಡಿದು, ನನ್ನನ್ನು ಸಂತೈಸಲು ಯತ್ನಿಸುತ್ತಿದ್ದುದರ ನೆನಪು ನನಗೆ ಈಗಲೂ ಇದೆ. ನನ್ನ ಹೃದಯದ ಸಂಕಟವನ್ನು ಅಣ್ಣನು ಹೇಗೆ ತಾನೇ ತಿಳಿಯುವನು? ನನಗೆ ಎದೆಯಲ್ಲಿ ಕುದಿಯುತ್ತಿರುವ ವಿಷಾದವನ್ನು ಯಾವ ವಚನಗಳಲ್ಲಿ ಹೊರಚೆಲ್ಲಬೇಕೆಂಬುದು ಹೊಳೆಯುತ್ತಿರಲಿಲ್ಲ ನಾನು "ಅಮ್ಮಾ! ಅಮ್ಮಾ!" ಎಂದು ರೋದಿಸುತ್ತಲಿದ್ದೆನು ಒಂದು ವೇಳೆ ನನ್ನ ಕ್ರಂದನದ ತಾತ್ಪರ್ಯವನ್ನು ಅಣ್ಣನು ಊಹಿಸಿರಬಹುದು ನಾನು ಉಚ್ಚರಿಸುತ್ತಿರುವ ಆ ಎರಡು ಅಕ್ಷರಗಳ ಶಬ್ದವನ್ನು ಕೇಳಿದಾಗ, ಮೌನವನ್ನು ಅವಲಂಬಿಸಿ ಅಣ್ಣನು ಆಕಾಶದ

ಕಡೆಗೆ ನೋಡುತ್ತ ನಿಟ್ಟುಸಿರು ಬಿಡುತ್ತಿದ್ದನು. ಹಲವು ಸಾರೆ ಅವನ ನೇತ್ರಗಳಿಂದ ಕಂಬನಿಯು ಹೊರಸೂಸುವುದುಂಟು. ಆ ಕಂಬನಿಗಳು ಅವನಿಗೆ ತಾಯಿಯ ಮೇ' ರುವ ಅತಿಶಯ ಪ್ರೇಮದ ಲಾಂಛನವೆಂಬುದನ್ನು ನಾನೀಗ ಅರಿತಿರುವೆನು.

ತಂದೆಯಾದರೂ ಬಹಳ ಕಾಲ ಬಾಳಲಿಲ್ಲವು. ನನಗೆ ಆರೇಳು ವರ್ಷ ಪ್ರಾಯ ವಿರುವಾಗ ಅವರು ಕಾಲವಾದರು. ಅವರ ಪ್ರೇಮಪುರಸ್ಸರವಾದ ನೋಟವನ್ನೂ ಮೃದುಮಧುರವಾದ ಕಂಠವನ್ನೂ ನಾನೆಂದಿಗೂ ಮರೆಯಲಾರೆನು. ನಮ್ಮ ತಂದೆ ಯವರು ಅತ್ಯಂತ ಸೌಮ್ಯ ಸ್ವಭಾವದವರಾಗಿದ್ದರಂತೆ. ಅವರ ವದನಮಂಡಲದಿಂದ ಒಂದೇ ಒಂದು ಅಪಶಬ್ದವಾಗಲಿ, ಕೋಪಯುಕ್ತವಾದ ನುಡಿಯಾಗಲಿ ಹೊರಬೀಳು ತ್ತಿರಲಿಲ್ಲವೆಂದು ಅಕ್ಕ-ಪಕ್ಕದ ಮನೆಯವರು ಆಡುತ್ತಿರುವದನ್ನು ನಾನು ಕೇಳಿರುವೆನು.

ನೆರೆಹೊರೆಯವರ ಮಾತುಗಳಿಂದಲೂ ನನಗಿರುವ ಅಲ್ಪಸ್ವಲ್ಪ ನೆನಪಿನಿಂದಲೂ ನನ್ನ ಎದೆಯಲ್ಲಿ ತಂದೆಯವರ ಒಂದು ಚಿತ್ರವನ್ನು ಬರೆಯಲು ನಾನು ಶಕ್ತನಾದೆನು. ಆ ಚಿತ್ರವು ಎಂದೂ ಮಾಸತಕ್ಕದ್ದಲ್ಲ. ತಂದೆಯವರು ಮೃತರಾದ ದೃಶ್ಯವು ನನಗೆ ಈಗಲೂ ನೆನಪಿದೆ, ಆದರೆ ಸಾವು ಎಂದರೆ ಏನೆಂಬುದನ್ನು ಆ ಕಾಲದಲ್ಲಿ ನಾನು ಅರಿತಿರಲಿಲ್ಲ. ಅದು ಒಂದು ಬಗೆಯ ನಿದ್ರೆಯೆಂದು ನಾನು ವಿಚಾರಿಸಿದ್ದೆನು. ತಂದೆ ಯವರ ಶವವನ್ನು ಮನೆಯ ಅಂಗಣದಲ್ಲಿ ಮಲಗಿಸಿದಾಗ, "ಅಣ್ಣಾ, ಅಪ್ಪ ನಿದ್ರೆ ಮಾಡ್ತಾನೆ." ಎಂದು ನಾನು ನುಡಿದುದೂ ನನ್ನ ನುಡಿಗಳನ್ನು ಕೇಳಿ ಅಣ್ಣನು ಅಳಲು ಪ್ರಾರಂಭಿಸಿದುದೂ ನನ್ನ ಸ್ಮೃತಿಪಥದಲ್ಲಿ ಈಗಲೂ ಹೊಳೆಯುತ್ತಿದೆ. ಅಣ್ಣನು ಅತ್ತುದೇಕೆಂಬುದು ನನಗೆ ಆಗ ತಿಳಿದಿರಲಿಲ್ಲ.

ನನ್ನನ್ನು ತಂದೆಯವರ ಶವದಹನ ಕರ್ಮವನ್ನು ನೋಡಲು ಬಿಟ್ಟಿರಲಿಲ್ಲ. ಹತ್ತಿರದ ಮನೆಯ ಕಿಟ್ಟುವೊಡನೆ ಆಡಲು ಹೇಳಿ, ನನ್ನ ಅಣ್ಣನು ನನ್ನನ್ನು ಅಲ್ಲಿಗೆ ಕಳುಹಿಸಿದನು. ಮನೆಯಲ್ಲಿ ನೆರೆದಿರುವ ಜನರ ಗುಂಪೂ, ಎಲ್ಲರೂ ಜೋಲು ಮೋರೆಯನ್ನು ಹಾಕಿಕೊಂಡಿರುವುದೂ ನನಗೆ ರುಚಿಸಲಿಲ್ಲ. ಆದುದರಿಂದ ಕಿಟ್ಟು ವೊಡನೆ ಆಡಲಭಿಸಿದ ಆ ಸಂದರ್ಭವು ನನ್ನಲ್ಲಿ ಅತ್ಯಂತ ಆಹ್ಲಾದವನ್ನುಂಟು ಮಾಡಿತೆಂದು ಹೇಳಬಹುದು, ಆದರೆ ಇಂದು ಅವನ್ನು ಕುರಿತು ನನ್ನಲ್ಲಿ ವಿಚಾರಿಸು ವಾಗ ಅತ್ಯಂತ ಲಜ್ಜೆಯೂ ವ್ಯಸನವೂ ಉದಯಿಸುತ್ತಲಿರುವುವು.

ಸಂಧ್ಯಾ ಸಮಯದಲ್ಲಿ ಅಣ್ಣನು ಬಂದು ನನ್ನನ್ನು ನಮ್ಮ ಮನೆಗೆ ಕರೆದು ಕೊಂಡು ಹೋಗುವವರೆಗೆ ನಾನು ಕಿಟ್ಟುವಿನ ಮನೆಯಲ್ಲಿಯೇ ಇದ್ದೆನು. ಮಧ್ಯಾಹ್ನ ಕಿಟ್ಟುವಿನ ತಾಯಿಯು ನನಗೆ ಅನ್ನವನ್ನು ನೀಡಿದಳು. ಅವಳು "ತಮ್ಮಾ ನೀನು ಇಂದಿನಿಂದ ತಬ್ಬಲಿಯಾದೆ" ಎಂದು ನುಡಿದುದರ ಸ್ಮರಣೆಯು ಈಗಲೂ ನನ್ನಲ್ಲಿ ಇರುವುದು; ಆದರೆ ಆ ದಿನ "ತಬ್ಬಲಿ" ಎಂಬ ನುಡಿಯ ಅರ್ಥವು ನನಗೆ ತಿಳಿಯಲಿಲ್ಲ.

ಮನೆಗೆ ಬಂದೊಡನೆಯೇ "ಅಪ್ಪಾ ಅಪ್ಪಾ," ಎಂದು ನಾನು ತಂದೆಯವರನ್ನು ಕೂಗಿದೆನು; ಆದರೆ ಅಪ್ಪನ ನುಡಿಯೇ ನನಗೆ ಕೇಳಿಬರಲಿಲ್ಲ ಮನೆಯ ಪ್ರತಿ

ಯೊಂದು ಕೋಣೆಯಲ್ಲಿಯೂ ಹುಡುಕಿದೆನು; ಆದರೆ ಅಪ್ಪನು ನನಗೆ ದೃಗ್ಗೋಚರ ನಾಗಲಿಲ್ಲ.

"ಅಪ್ಪಾ-ಎಲ್ಲಿ?" ಎಂದು ನಾನು ಅಣ್ಣನನ್ನು ಪ್ರಶ್ನಿಸಿದೆನು; ಆದರೆ ಅವನು ಮಾತಾಡದೆ ನಡುಮನೆಯ ಒಂದು ಮೂಲೆಯಲ್ಲಿ ಕುಳಿತು, ಜೋಲು ಮೋರೆ ಮಾಡಿಕೊಂಡು "ರಾಂ, ರಾಂ" ಎನ್ನತೊಡಗಿದನು. ಅವನ ಈ ವರ್ತನೆಯ ತಾತ್ಪರ್ಯವು ನನಗೆ ಹೊಳೆಯಲಿಲ್ಲ.

ನಾನು ಅಡಿಗೆ ಕೋಣೆಯ ಕಡೆಗೆ ಓಡಿದೆನು. ಅಡಿಗೆಯವಳು ಒಲೆಯಲ್ಲಿ ಅನ್ನವನ್ನು ಬೇಯಿಸುತ್ತ ಕುಳಿತಿದ್ದಳು. ನಾನು ಅವಳನ್ನು 'ಅತ್ತಿ' ಎಂದು ಕರೆಯುತ್ತಲಿದ್ದೆನು. ಅವಳು ನನಗೆ ಹೇಗೆ 'ಅತ್ತಿ'ಯಾದಳೋ ಎಂಬುದನ್ನು ನಾನು ಬಲ್ಲವನಲ್ಲ. ಅವಳು ನಮ್ಮ ಬಂಧುವೇನೂ ಅಲ್ಲ; ಆದರೆ ಅವಳು ಎಲ್ಲರಿಗೂ "ಅತ್ತಿ" ಯಾಗಿದ್ದಳು. ನಾನು ಅವಳ ಮಡಿಯಲ್ಲಿ ಕುಳಿತು "ಅತ್ತಿ" ಎಂದು ನುಡಿದೆನು.

"ಏನಪ್ಪಾ ಶೀನು?" ಎಂದಳು ಅವಳು. "ಅಪ್ಪ ಎಲ್ಲಿ?"

ಅವಳು ಮಾತಾಡಲಿಲ್ಲ. ಬೆತ್ತದ ಕೋಲಿನಿಂದ ಹೊಡೆತವನ್ನು ತಿಂದವಳ ಹಾಗೆ ಘೊಳ್ಳೆಂದು ಅಳಲು ಪ್ರಾರಂಭಿಸಿದಳು. ನಾನು ನನ್ನ ಹಟವನ್ನು ಬಿಡಲಿಲ್ಲ. "ಅಪ್ಪ ಎಲ್ಲಿ?" ಎಂದು ಪುನಃ ಪ್ರಶ್ನಿಸಿದೆನು.

ಅವಳು ತನ್ನ ಸೀರೆಯ ಸೆರಗಿನಿಂದ ಕಣ್ಣುಗಳನ್ನು ಒರಸಿಕೊಂಡು "ಅವರು ಹೊರಟು ಹೋದರು." ಎಂದು ನುಡಿದಳು. "ಎಲ್ಲಿಗೆ?"

"ಅಲ್ಲಿಗೆ!" ಎಂದು ಅವಳ ಉತ್ತರವು ಲಭಿಸಿತು. ಅದರ ತಾತ್ಪರ್ಯವನ್ನು ನಾನು ತಿಳಿಯಲಿಲ್ಲ. ಅವಳ ಸೀರೆಯ ಸೆರಗನ್ನು ಹಿಡಿದುಕೊಂಡು ಪುನಃ "ಎಲ್ಲಿಗೆ?" ಎಂದು ಕೇಳಿದೆನು. "ಅಮ್ಮ ಇದ್ದಲ್ಲಿಗೆ!"

"ಅಮ್ಮ ಎಲ್ಲಿರುವಳು?" "ಸ್ವರ್ಗದಲ್ಲಿ!"

"ಪುನಃ ಬರುವದಿಲ್ಲವೆ?" ಎಂದು ಉತ್ಸುಕನಾಗಿ ನಾನು ಕೇಳಿದೆನು

"ಇಲ್ಲ. ಕಂದಾ, ಅಲ್ಲಿಗೆ ತೆರಳಿದವರು ಹಿಂದಿರುಗಿ ಬರುವದಿಲ್ಲ."

"ಹಾಗಾದರೆ ಅಲ್ಲಿಗೆ ನನಗೂ ಹೋಗಬೇಕು." ಎಂದು ನುಡಿದೆನು.

"ಈಗ ಹೋಗಕೂಡದು. ಅಂತ್ಯದಲ್ಲಿ ದೇವರು ಕರೆಯಿಸುವಾಗ ಹೋಗತಕ್ಕದ್ದು" ಎಂದು ನುಡಿದು, ಅವಳು ಪುನಃ ರೋದಿಸಲು ಪ್ರಾರಂಭಿಸಿದಳು.

ನನಗೆ ದೇವರು ಮತ್ತು ಸ್ವರ್ಗ ಎಂದರೆ ಏನೆಂಬುದು ತಿಳಿದಿರಲಿಲ್ಲ. ದೇವರೆಂದರೆ ನಮ್ಮ ಮನೆಯಲ್ಲಿ ಪೂಜಿಸುವ ವಿಗ್ರಹವೆಂದಾಗಿದ್ದಿತು. ಆ ಕಾಲದಲ್ಲಿ ನನಗಿರುವ ಭಾವನೆಯೆ ಅದು. ಬಳಿಕ ನಾನು ಅಣ್ಣನ ಬಳಿಗೆ ತೆರಳಿದೆನು.

"ಅಣ್ಣಾ! ಅಣ್ಣಾ!"

"ಏನಪ್ಪಾ ಶೀನು?"

"ಅಪ್ಪ ಇದ್ದಲ್ಲಿಗೆ ಕರೆದುಕೊಂಡು ಹೋಗು."

ಅಣ್ಣನು ಮಾತಾಡಲಿಲ್ಲ. ಅವನ ನೇತ್ರಗಳಿಂದ ಬಾಷ್ಪಗಳು ಪ್ರವಹಿಸಲಾರಂಭಿಸಿದವು. ನಾನು ಅಪ್ಪ ಇದ್ದಲ್ಲಿಗೆ ಹೋಗಬೇಕೆಂದು ಛಲ ಹಿಡಿದು ಅಳತೊಡಗಿದೆನು. ಅವನು ಹಲವು ಉಪಾಯಗಳಿಂದ ನನ್ನನ್ನು ಸಂತೈಸಲು ಪ್ರಯತ್ನಿಸಿದನು. ನನ್ನ ಆಟದ ಸಾಮಾನುಗಳನ್ನು ತಂದು ನನ್ನ ಮುಂದಿಟ್ಟನು. ತಿಂಡಿಯ ಆಶೆಯನ್ನು ತೋರಿಸಿದನು; ಆದರೆ ಅವನ ಪ್ರಯತ್ನಗಳು ಯಾವವೂ ಫಲಕಾರಿಯಾಗಲಿಲ್ಲ. ಅವು ಯಾವುವೂ ನನಗೆ ಬೇಡವಾಗಿದ್ದುವು. 'ಅಪ್ಪನಿದ್ದಲ್ಲಿಗೆ ಹೋಗಬೇಕು.' ಈ ನನ್ನ ಅಳುವು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿತು.

ನನ್ನ ಕ್ರಂದನದ ಗಲಭೆಯನ್ನು ಕೇಳಿ ನೆರೆಮನೆಯ ಕಿಟ್ಟುವಿನ ತಾಯಿಯು ಬಂದಳು. ಅವಳು ನಾನಾವಿಧಗಳಲ್ಲಿ ನನ್ನನ್ನು ಶಾಂತಗೊಳಿಸಲು ಪ್ರಯತ್ನಿಸಿದಳು; ಆದರೆ ನಾನು ನನ್ನ ಹಟವನ್ನು ಬಿಡಲಿಲ್ಲ. ಅಂತ್ಯದಲ್ಲಿ ಅಪ್ಪನನ್ನು ತೋರಿಸಿಕೊಡುವೆನೆಂದು ನುಡಿದು, ಅವಳು ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಸ್ವಲ್ಪ ಸಮಯದಲ್ಲಿಯೇ ಅಳುವನ್ನು ನಿಲ್ಲಿಸಿ, ನಾನು ಕಿಟ್ಟುವಿನೊಡನೆ ಆಡಲು ಪ್ರಾರಂಭಿಸಿದೆನು. ಆ ನೆನಪು ಎಂದಿಗೂ ಮಾಸತಕ್ಕುದಲ್ಲ.

---

## [೨]

ನಮ್ಮ ತಂದೆಯು ಈ ಲೋಕಯಾತ್ರೆಯನ್ನು ಅಂತ್ಯಗೊಳಿಸುವಾಗ ಅಣ್ಣನಿಗೆ 22-23 ವರ್ಷ ಪ್ರಾಯವಾಗಿರಬಹುದು. ಅವನು ಒಬ್ಬ ಬಿ. ಏ. ಆಗಿದ್ದು, ನಮ್ಮೂರಿನ ಹೈಸ್ಕೂಲಿನಲ್ಲಿ ಒಬ್ಬ ಶಿಕ್ಷಕನ ಉದ್ಯೋಗವನ್ನು ಪಡೆದಿದ್ದನು. ನನಗೂ ಅವನಿಗೂ ಹದಿನಾರು-ಹದಿನೇಳು ವರ್ಷಗಳ ಅಂತರವಿದ್ದಿತು. ಅವನಾದರೋ ಪ್ರತಿಯೊಂದರಲ್ಲಿಯೂ ತಂದೆಯನ್ನೇ ಹೋಲುತ್ತಲಿದ್ದನು. ಅಹಂಕಾರಶೂನ್ಯತೆ, ಶಾಂತಸ್ವಭಾವ, ಸರಳಮನಸ್ಕತೆ ಇವುಗಳು ಅವನಲ್ಲಿ ಮೂರ್ತಿಮತ್ತಾಗಿ ನೆಲೆಗೊಂಡಿದ್ದವು; ಆದರೆ ಅವನ ಮನಸ್ಸು ಅಷ್ಟು ದೃಢವಾದುದಲ್ಲ. ಈ ಸಂಸಾರದ ಕಡಲಿನಲ್ಲಿ ಏಳುವ ಪುಟ್ಟ ಅಲೆಗಳು ಕೂಡ ಅವನ ಮನಸ್ಸಿನ ಶಾಂತತೆಯನ್ನು ಭಂಜಿಸಿ, ಅಲ್ಲೋಲ-ಕಲ್ಲೋಲ ಮಾಡಲು ಶಕ್ತವಾಗಿದ್ದುವು. ಪುನಃ ಶಾಂತತೆಯು ನೆಲಸಬೇಕಾದರೆ ಅದೆಷ್ಟೋ ಸಮಯವು ಬೇಕಾಗಿ ಬರುತ್ತಲಿದ್ದಿತು ಚಿಕ್ಕದಾದ ಯಾವ ಕಾರ್ಯವಾದರೂ ಸರಿ; ಅವನ ಅಭಿಮತಕ್ಕೆ ವಿಪರೀತವಾಗಿ ನಡೆದು ಹೋದರೆ, ಅವನ ಮನಸ್ಸು ನಿರಾಶೆಯ ತಾಂಡವಭೂಮಿಯಾಗಿ ಪರಿಣಮಿಸುತ್ತಲಿದ್ದಿತು.

ಅವನ ಮನಸ್ಸಿನಂತೆಯೇ ಶರೀರವಾದರೂ ಶ್ರಮವಹನಾದ ಕೆಲಸಗಳಿಗೆ ತಕ್ಕದಾಗಿರಲಿಲ್ಲ. ಪ್ರತಿಯೊಂದು ಕೆಲಸವೂ ಸುಸಾಂಗವಾಗಿ ಒಂದು ಯಂತ್ರದ ಚಲನೆಯಂತೆ ಮುಂದೆ ಸಾಗುತ್ತಿರಬೇಕು. ಅದರಲ್ಲಿ ಸ್ವಲ್ಪ ಭಂಗವು ಬಂದರೆ ಸಾಕು, ಅವನ ನರಗಳು ಕ್ಷುಬ್ಧವಾಗಿ ಚಿತ್ತವೃತ್ತಿಯ ಶಾಂತಿಯನ್ನು ಭಂಗಪಡಿಸುವುವು. ಅವನು ತನ್ನ ಅಧ್ಯಾಪಕ ಕೆಲಸವನ್ನು ಪೂರೈಸಿ ಬಂದರೆ, ಮನೆಯಲ್ಲಿ ಪುಸ್ತಕ ಪಾರಾಯಣದಲ್ಲಿ

ತನ್ನ ಸಮಯವನ್ನು ಕಳೆಯುವುದು ಅವನ ಅಭ್ಯಾಸವಾಗಿ ಹೋಗಿರುವುದು. ಕೆಲವು ಸಾರಿ ನನ್ನನ್ನು ಕರೆದುಕೊಂಡು ವಾಯುಸಂಚಾರಕ್ಕೆ ತೆರಳುವ ಪದ್ಧತಿಯೂ ಇದೆ.

ಅನ್ಯರು ತನ್ನನ್ನು ನಿಂದಿಸುವುದನ್ನು ಅವನು ಸಹಿಸಲಾರನು. ಯಾರಾದರೂ ತನ್ನನ್ನು ದೂಷಿಸಿದರೆ, ಕಣ್ಣೀರು ಹರಿಸುವ ಕಾಹಿಲೆಯು ಅವನಿಗಿದೆ. ಅದರಂತೆಯೇ ವಾದ-ವಿವಾದಗಳಲ್ಲಿ ಭಾಗವನ್ನು ವಹಿಸಲು ಅವನ ಶಾರೀರಿಕ ಪ್ರಕೃತಿಯು ಸಮ್ಮತಿಸದು. ಇಷ್ಟೆಲ್ಲ ಪ್ರತಿಬಂಧವಾಗಿದ್ದರೂ, ಯಾವ ಶಬ್ದವೂ ಇಲ್ಲದೆ ತಾನು ಹಿಡಿದ ಕೆಲಸವನ್ನು ಅಂತ್ಯದಲ್ಲಿ ಕೊನೆಗಾಣಿಸುವ ಕರ್ಮಕೌಶಲ್ಯವು ಅವನಲ್ಲಿದೆ. ಇದೇ ಅವನ ಜೀವನದ ಯಶಸ್ವಿತೆಗೆ ಪ್ರಧಾನ ಕಾರಣವೆಂದು ಹೇಳಬಹುದು.

ಓದುಗರಿಗೆ ನನ್ನ ಸ್ವಭಾವದ ಅಲ್ಪಪರಿಚಯವನ್ನು ನೀಡುವುದು ಅಪರಾಧವಾಗಲಿಕ್ಕಿಲ್ಲವೆಂಬುದು ನನ್ನ ಊಹೆ. ನನ್ನ ಶರೀರವು ಅಣ್ಣನವರಂತೆ ಕೋಮಲವಾದುದಲ್ಲ. ಮನಸ್ಸು ಬಲವಾದುದೇ ಎಂದು ನುಡಿಯಬಹುದು. ಹಿಮಾಲಯವನ್ನು ಬುಡದಿಂದ ಕಿತ್ತು ಅರಬೀಸಮುದ್ರಕ್ಕೆ ಎಸೆದು ಬಿಡುವಷ್ಟು ಚೈತನ್ಯಯುಕ್ತವಾಗಿದೆ. ಕೋಪವು ನನ್ನ ಒಡಹುಟ್ಟಿದ ತಂಗಿಯಾಗಿರುವಳು. ಹಟಮಾರಿತನವು ಚಿಕ್ಕಂದಿನಿಂದಲೂ ನನ್ನೊಡನೆ ಒಡನಾಡಿದ ಗೆಳೆಯನಾಗಿರುತ್ತಾನೆ. ನಾನು ಹಿಡಿದುದು ಮರ್ಕಟಮುಷ್ಟಿ! ಆದರಿಂದ ನನ್ನನ್ನು ವಿಮುಖನನ್ನಾಗಿ ಮಾಡಲು ಯಾರಿಗೂ ಸಾಧ್ಯವಾದುದಲ್ಲ. ಶಾಲೆಯಲ್ಲಿರುವಾಗ ಹುಡುಗರೊಳಗೆ ತುಂಟರ ಕೇಪ್ಟನ್ನನೆಂಬ ಬಿರುದನ್ನು ಸಂಪಾದಿಸಿದ ಧೀರನು ನಾನಿರುವೆನು. ಹಲವು ಸಾರೆ ನನ್ನ ಅಧ್ಯಾಪಕರು ನನ್ನ ಕಡೆಗೆ ಬೆರಳು ತೋರಿಸಿ "ಕೇಶವರಾಯರ ತಮ್ಮನು ಬಹಳ ಪೋಲಿ" ಎಂದು ನುಡಿಯುವುದನ್ನು ನಾನು ಕೇಳಿರುವೆನು. ಅನ್ಯರ ಬಾಯಿಗಳಿಂದ ಕೆಟ್ಟ ಮಾತುಗಳನ್ನು ಹೇಳಿಸುವುದು ಒಂದು ಅಭಿಮಾನವೆಂದು ವಿಚಾರಿಸುವ ವ್ಯಕ್ತಿಗಳಲ್ಲಿ ನಾನೂ ಒಬ್ಬನಾಗಿರುವೆನು.

ನಮ್ಮ ತಂದೆಯು ಹಿಂದಿರುಗಿ ಬರಲಾರದ ಆ ಪ್ರವಾಸವನ್ನು ಕೈಕೊಂಡು ವರ್ಷವೊಂದು ಕಳೆಯಿತು. ವರ್ಷಾಬ್ಧಿಕ ಕರ್ಮವು ಸುಸಾಂಗವಾಗಿ ನೆರವೇರಿತು. ಮನೆಯಲ್ಲಿರುವವರೆಂದರೆ, ನಾನು, ಅಣ್ಣ (ಈತನ ಹೆಸರು ಕೇಶವರಾಯ) ಅಡಿಗೆಯವಳು, ಮತ್ತು ಒಬ್ಬ ಆಳುಮಗ ಮಾತ್ರವಾಗಿದ್ದೆವು. ಅಣ್ಣನು ತನ್ನ ಶಾಲೆಯ ಕೆಲಸಗಳನ್ನು ಪೂರೈಸಿ ಬಂದ ನಂತರ ತನ್ನ ಆಫೀಸು ಕೋಣೆಯಿಂದ ಹೊರಬೀಳುವುದು ಅಪರೂಪವಾಗಿದ್ದಿತು. ಒಂದು ಪುಸ್ತಕವನ್ನು ಬಿಡಿಸಿ ತನ್ನ ಮುಂದಿಟ್ಟುಕೊಂಡು ಅದರಲ್ಲಿರುವ ಎಲ್ಲ ಸಂಗತಿಗಳನ್ನು ಜೀರ್ಣಿಸಲು ಯತ್ನಿಸುತ್ತ, ಅದನ್ನು ಏಕಾಗ್ರದೃಷ್ಟಿಯಿಂದ ನಿರೀಕ್ಷಿಸುತ್ತಿರುವುದು, ನಾನು ಅವನ ಕೋಣೆಯೊಳಗೆ ಇಣಿಕಿ ನೋಡಿದಾಗ ಕಾಣುವ ದೃಶ್ಯವಾಗಿದ್ದಿತು.

ಬಾಲ್ಯದಲ್ಲಿ ನನಗಾದರೋ ಪುಸ್ತಕ ಹಿಡಿಯುವದೆಂದರೆ, ಅತ್ಯಂತ ಬೇಸರವಾದ ಕೆಲಸವಾಗಿದ್ದಿತು. ಬ್ರಹ್ಮನು ವಿದ್ಯೆಯೆಂಬ ಸಾಧನವನ್ನು ಹುಟ್ಟಿಸಿ ಈ

ಭೂಮಿಯ ಮೇಲೇಕೆ ಬಿಸುಟಿದನೆಂದು ಹಲವು ಸಾರೆ ವಿಚಾರಿಸುತ್ತಿರುವೆನು. (ಇದು ಚಿಕ್ಕಂದಿನಲ್ಲಿ) ನಾನು ಹೆಚ್ಚಿನ ಸಮಯವನ್ನು ನನ್ನ ಪ್ರಾಯದ ಬಾಲಕರೊಡನೆ ಆಡುವುದರಲ್ಲಿ ಕುಸ್ತಿಮಾಡುವದರಲ್ಲಿ ವಿನಿಯೋಗಿಸಿದೆನು. ಮನೆಯೆಂದರೆ, ನನಗೆ ಅತ್ಯಂತ ಬೇಸರವು. ಅಲ್ಲಿ ಆಡುವುದಕ್ಕಾಗಲಿ-ಮಾತಾಡುವುದಕ್ಕಾಗಲಿ ನನ್ನ ವಯಸ್ಸಿನವರು ಯಾರೂ ಇರುವುದಿಲ್ಲ. ಅಣ್ಣನು ನನಗಿಂತ ದೊಡ್ಡವನೂ ಹಿರಿಯರ ಗುಂಪಿಗೆ ಸೇರಿದವನೂ ಆಗಿರುವುದರಿಂದ ಅವನೊಡನೆ ಆಡಲು ಸಾಧ್ಯವಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ, ಆ ಕಾಲವನ್ನೆಲ್ಲ ಹೆಚ್ಚಾಗಿ ಮನೆಯ ಹೊರಗೇ ಕಳೆದೆನೆಂದರೆ ಸಾಕಾಗಬಹುದು.

ದಿನಗಳು ಒಂದೊಂದಾಗಿ ಸಾಗುತ್ತಿದ್ದವು. ಸಮುದ್ರಮಧ್ಯದಲ್ಲಿ ತೇಲುತ್ತಿರುವ ಹಡಗದ ಹಾಗೆ ನನ್ನ ಜೀವನದ ಯಾತ್ರೆಯು ವಿಶೇಷ ಸಂಭವಗಳಿಲ್ಲದೆ ಮುಂಪೆ ಸಾಗುತ್ತಲಿದ್ದಿತು.

ಒಂದು ದಿನ ನಮ್ಮ ಮಾವನು ಬಂದನು. ಮಾವನೆಂದರೆ, ನಮಗೆಲ್ಲರಿಗೂ ಅತ್ಯಾದರವು. ಅಣ್ಣನು ಅವನಿಗೆ ಬೇಕಾದ ಉಪಚಾರಗಳನ್ನು ಮಾಡಿದನು. ಮಾವನು ಬಂದು ನಡುಮನೆಯಲ್ಲಿ ಕುಳಿತಿದ್ದಾಗ ನಾನು ಆಗ ತಾನೆ ನನ್ನ ದಿನದ ಪ್ರೋಲೀ ಸರ್ಕೀಟನ್ನು ಪೂರೈಸಿಕೊಂಡು ಮನೆಗೆ ಬಂದೆನು. "ಏನು, ಶೀನು! ಸುಖದಲ್ಲಿರುವೆಯಾ?" ಎಂದು ವಾತ್ಸಲ್ಯದ ಧ್ವನಿಯಲ್ಲಿ ಕೇಳಿದನು ನಮ್ಮ ಮಾವ. ನಾನು ಅವನ ಹತ್ತಿರ ಹೋಗಿ ನಿಂತುಕೊಂಡೆನು. ಅವನು ನನ್ನ ಕೈಹಿಡಿದು ಮೈದಡವುತ್ತಾ, "ಯಾವ ಕ್ಲಾಸಿನಲ್ಲಿ ಕಲಿಯುತ್ತೀ?" ಎಂದನು.

"ಮೂರನೇ ಇ-ಯತ್ತೆಯಲ್ಲಿ!" ಎಂದೆನು ನಾನು.

ಐದು ನಿಮಿಷಗಳು ಕಳೆಯುವುದರೊಳಗಾಗಿ ನಾನೂ ಮಾವನೂ ಜೀವದ ಗೆಳೆಯರಾದೆವು. ಅವನ ಮೀಸೆಯನ್ನು ಹಿಡಿದು ನೋಡುತ್ತ, "ಮಾವ, ನನಗೇಕೆ ಮೀಸೆಯಿಲ್ಲ?" ಎಂದು ಕೇಳಿದೆನು.

"ನೀನು ದೊಡ್ಡವನಾದರೆ ಮೀಸೆಯು ತಾನಾಗಿಯೇ ಬರುವದು."

"ನಾನು ದೊಡ್ಡವನಾಗುವುದಾವಾಗ?" ಎಂದು ನುಡಿದೆನು. ಆ ಕಾಲದಲ್ಲಿ ನಾನು ದೊಡ್ಡವನಾಗುವೆನೆಂಬ ನಂಬಿಕೆಯೇ ನನಗಿರಲಿಲ್ಲ. "ದೊಡ್ಡವನಾದರೆ ಆಡಕೂಡದೇ?"

"ಇಲ್ಲಪ್ಪಾ, ದೊಡ್ಡವರು ಆಡುವುದಿಲ್ಲ." ಎಂದ ನಮ್ಮ ಮಾವ.

"ಹಾಗಾದರೆ ನಾನು ದೊಡ್ಡವನಾಗಬೇಕಾಗಿಲ್ಲ." ಎಂದು ನಾನು ಹೇಳಿದೆನು. ಜೀವನದಲ್ಲಿ ಆಟ-ಪಾಟಗಳ ವಿನೋದವು ಅತ್ಯಂತ ಮಹತ್ವವಾದುದೆಂದು ಅಂದು ನಾನು ವಿಚಾರಿಸಿದ್ದೆನು. ನಾನು ಮಾವನೊಡನೆ ಶಾಲೆ, ಪಾಠಗಳು, ಹುಡುಗರು, ಗುಳಿಗೇ ಮೇಸ್ತ್ರು, (ಗುರುಗಳಿಗೆ ಆ ಹೆಸರು ನಾಮಕರಣ ಮಾಡಿದ ಭೂಪತಿಯು ನಾನಾಗಿರುವೆನು) ಹತ್ತಿರದ ಮನೆಯ ಕಿಟ್ಟು ಇವರೆಲ್ಲರನ್ನೂ ಕುರಿತು ಹೇಳಿದೆನು.

ಈ ಸಲ ಭಾಷಣೆಯ ಮಧ್ಯದಲ್ಲಿ ನನ್ನನ್ನು ಹೊಡೆದ ಕ್ಲಾಸು ಮಾಸ್ತರರನ್ನು ಬಯ್ಯುವದಕ್ಕೆ ನಾನು ಎಂದಿಗೂ ಮರೆತಿರಲಿಲ್ಲ.

"ಶೀನು, ಮೇಸ್ತ್ರನ್ನ ಬಯ್ಯಬಾರದಪ್ಪ." ಎಂದು ಮಾವನು ವಾತ್ಸಲ್ಯಪರಿಪೂರ್ಣವಾದ ಧ್ವನಿಯಲ್ಲಿ ಮಾತನಾಡಿದನು

"ಅದೇಕೆ ಮಾವ? ಅವ್ರು ಸುಮ್ಮುಸುಮ್ನೆ ಹುಡುಗ್ರನ್ನ ಹೊಡೀತಾರೆ."

"ಹುಡುಗರಿಗೆ ಒಳ್ಳೆಯ ಬುದ್ಧಿ ಬರುವುದಕ್ಕೆ!"

"ಹೊಡೆದರೆ ಹುಡುಗರು ಬುದ್ಧಿವಂತರಾಗುವರೆ?"

"ನೀನು ಸುಮ್ಮನೆ ಪ್ರಶ್ನೆ ಮಾಡಬೇಡ ಮಗೂ, ತಪ್ಪು ಮಾಡಿದವರನ್ನು ಹೊಡೆಯದೇ ಹೋದರೆ, ಹುಡುಗರು ಒಳ್ಳೇ ಬುದ್ಧಿಯನ್ನು ಕಲಿಯಲಾರರು"

ಎಂದು ನುಡಿದ ನಮ್ಮ ಮಾವನ ಉತ್ತರವು ನನ್ನ ಸಂದೇಹವನ್ನು ಹೋಗಲಾಡಿಸಲಿಲ್ಲ. ಹುಡುಗರಿಗೆ ಚಂಡಾಡುವದು ಹೇಗೆ ಒಂದು ವಿನೋದವೋ, ಹಾಗೆಯೇ ಅಧ್ಯಾಪಕರಿಗೆ ಮಕ್ಕಳನ್ನು ಹೊಡೆಯುವದೂ ಒಂದು ವಿನೋದವಾಗಿದೆ ಎಂದು ನಾನು ತಿಳಿದಿದ್ದೆನು ಈಗ ನಾನು ದೊಡ್ಡವನಾಗಿದ್ದರೂ ಆ ಅಭಿಪ್ರಾಯವು ಸಂಪೂರ್ಣವಾಗಿ ಪಲ್ಲಟಿಸಿರುವದಿಲ್ಲ ಮಕ್ಕಳನ್ನು ಶಿಕ್ಷಕನು ಪ್ರಹರಿಸುವುದು ತನ್ನ ಕೌಶಲ್ಯದಿಂದಲೂ ನುಡಿಗಳಿಂದಲೂ ಬಾಲಕರಿಗೆ ಸರಿಯಾದ ಮಾರ್ಗವನ್ನು ತೋರಿಸಲು ಅಸಮರ್ಥನಾಗಿದ್ದಾಗ ಎಂದಾಗಿದೆ ನನ್ನ ಈ ಅಭಿಪ್ರಾಯವು.

ಅದು ಹಾಗಿರಲಿ. ಮಾವನೊಡನೆ ನಮ್ಮ ಹಸುಗಂಗೆಯು ಕರು ಹಾಕಿರುವದೆಂದೂ ಪುಟ್ಟದಾದ ಆ ಕರು ಅತ್ಯಂತ ವೇಗವಾಗಿ ಮನೆಯ ಅಂಗಳದಲ್ಲಿ ಓಡುತ್ತಿರುವುದೆಂದೂ ನಾನು ವಿವರಿಸಿದೆನು ಮಾವನು ನಗುತ್ತಾ ನನ್ನ ನುಡಿಗಳನ್ನು ಕೇಳುತ್ತಲಿದ್ದನು. ನಾನು ಮಾತಾಡುತ್ತಿರುವಾಗ ಉದ್ದವಾದ ಮಾವನ ಮೀಸೆಯನ್ನು ಆಗಾಗ್ಗೆ ಹಿಡಿದೆಳೆಯಲು ನಾನು ಮರೆತಿರಲಿಲ್ಲ.

"ಶೀನೂ, ಮೀಸೆ ಹಿಡಿದೆಳೆಯದಿರು; ನೋವಾಗುವುದದು."

"ಮಾವಾ, ನಾನು ಸುಮ್ಮನೆ ಬಿಡುವವನಲ್ಲ." ಎಂದು ನುಡಿದು, ಇನ್ನಷ್ಟು ಬಲವಾಗಿಯೇ ಮೀಸೆಯನ್ನು ಹಿಡಿದೆಳೆದೆನು. ಓದುಗರು ಬಾಲಕರಿರುವಾಗ, ಒಂದು ವೇಳೆ ಅವರೂ ತಮ್ಮ ಮಾವಂದಿರ ಮೀಸೆಯನ್ನು ಹಿಡಿದೆಳೆದಿರಬಹುದು.

ಮರುದಿನ ಒಂದಾಣೆಗೆ ಪೆಪ್ಪರುಮೆಂಟನ್ನು ತೆಗೆದುಕೊಡುವೆನೆಂಬ ಕರಾರಿನಂತೆ ನನಗೂ ಮಾವನಿಗೂ ಸಂಧಾನವಾಯಿತು ರಾತ್ರಿ ಊಟ ಮಾಡುವ ವೇಳೆಯಲ್ಲಿ ಮಾವನ ಪಕ್ಕದಲ್ಲಿಯೇ ಕುಳಿತುಕೊಳ್ಳಲು ನಾನು ಮರೆಯಲಿಲ್ಲ. ಅನಂತರ ಮಾವನೂ ಅಣ್ಣನೂ ನಡುಮನೆಯಲ್ಲಿ ಕುಳಿತುಕೊಂಡು ಮಾತಾಡತೊಡಗಿದರು. ನಾನು ಮಾವನ ಆಸನದ ಹಿಂಬದಿಯಲ್ಲಿ ನಿಂತು ಅವನ ಜುಟ್ಟನ್ನು ಬಿಚ್ಚಿ ನೋಡುತ್ತಾ ಅವರ ಸಂಭಾಷಣವನ್ನು ಕೇಳುತ್ತಲಿದ್ದೆನು.

"ಕೇಶೂ, ನಿನಗೆ ಹತ್ತಿಪ್ಪತ್ತು ವಯಸ್ಸಾಗುತ್ತಾ ಬಂದಿತು; ಮದುವೆಯಾಗುವ

ಆಲೋಚನೆಯಿಲ್ಲವೆ?" ಎಂದನು ಮಾವ

ಅಣ್ಣನು ಉತ್ತರವನ್ನು ನೀಡುವುದಕ್ಕೆ ಮುಂಚೆಯೇ ನಾನು ನಡುವೇ ಬಾಯಿ ಹಾಕಿ "ಮದುವೆಯೆಂದರೆ ಏನು?" ಎಂದು ಕೇಳಿದೆನು ಮಾವನ ಜವಾಬು ಲಭಿಸುವುದಕ್ಕೆ ಮುಂಚೆಯೇ "ಘಟಿಂಗ, ತಲೆ ಹರಟೆ ಸಾಕು! ಸುಮ್ಮನೆ ಇಲ್ಲಿ ನಿಲ್ಲಲು ಸಾಧ್ಯವಿಲ್ಲದಿದ್ದರೆ ಹೋಗಿ ಮಲಗಿಕೋ!" ಎಂದು ಅಣ್ಣನು ಕಣ್ಣು ಕೆಂಪು ಮಾಡಿಕೊಂಡು ಆಜ್ಞಾಪಿಸಿದನು.

ಅಷ್ಟು ಕೋಪಭರಿತನಾಗುವುದಕ್ಕೆ ನಾನು ಮಾಡಿದ ಅಪರಾಧವಾವುದೆಂದು ನನಗೆ ತಿಳಿಯಲಿಲ್ಲ. ಎಲ್ಲರೂ ಮದುವೆ-ಮದುವೆಯೆಂದು ನುಡಿಯುತ್ತಿದ್ದರಲ್ಲದೆ, ಅದರ ತಾತ್ಪರ್ಯವೇನೆಂಬುದನ್ನು ಹೇಳಿಕೊಡುವವರಿಲ್ಲ. ಅದರ ರಹಸ್ಯವೇನೆಂಬುದನ್ನು ತಿಳಿಯಲು ನಾನು ಉತ್ಸುಕನಾಗಿದ್ದುದರಿಂದ ನಾನು ಪ್ರಶ್ನಿಸಿದೆನು. ಅಣ್ಣನು ಇಷ್ಟು ಬೆಂಕಿಕಾರಬೇಕಾದ ಆವಶ್ಯವೇನು? ನಾನು ಮನಸ್ಸಿನಲ್ಲಿಯೇ ಮದುವೆಯೆಂದರೆ ಹೋಳಿಗೆ, ಪೂರಿ, ಲಾಡು ಇವುಗಳಿಂದ ಹೊಟ್ಟೆಗಳನ್ನು ಪೂಜಿಸುವ ವಿಧಾನವೆಂದು ವಿಚಾರಿಸಿಕೊಂಡೆನು. ಎರಡು ಮೂರು ವಿವಾಹಸಂಭ್ರಮಕ್ಕೆ ತೆರಳಿದಾಗ ಈ ಭಕ್ಷ್ಯ-ಭೋಜ್ಯಗಳು ಸಿದ್ಧವಾಗಿದ್ದುವು.

"ಅದಕ್ಕೆ ಆತುರವೇನು?" ಎಂದು ಮಾವನ ಪ್ರಶ್ನೆಗೆ ಅಣ್ಣನು ಉತ್ತರವನ್ನು ನೀಡಿದನು.

"ಕೇಶು, ನೀನು ಯಾವಾಗಲೂ ಆತುರವೇನೆಂದು ಕೇಳುತ್ತಿರುವೆ! ನಿನ್ನ ಶರೀರದ ಕಡೆಗೆ ಗಮನವನ್ನು ನೀಡಲು, ಶೀನುವನ್ನು ನೋಡಿ ಸಂರಕ್ಷಿಸಲು, ಗೃಹವನ್ನು ನೋಡಿ ಅಚ್ಚುಕಟ್ಟಾಗಿ ನಡೆಯಿಸಲು ಒಬ್ಬ ಗೃಹಿಣಿಯು ಅತ್ಯಾವಶ್ಯವಾಗಿದ್ದಾಳೆ. ನಿನಗೇನೂ ಅನಾನುಕೂಲತೆಗಳಿರುವದಿಲ್ಲ. ಒಳ್ಳೇ ಉದ್ಯೋಗವಿದೆ—"

'ಮಾವಾ, ಅದಕ್ಕೇನು? ಈಗಲೂ ನಮ್ಮ ಗೃಹವು ಸುಸಾಂಗವಾಗಿ ಸಾಗುತ್ತದೆ'

"ಇಲ್ಲ. ಕೇಶು, ನೀನಾವ ರೀತಿಯಲ್ಲಿ ಶೋಕಬಾಧಿತನಾಗಿರುವೆ ಎಂಬುದನ್ನು ನಿನ್ನ ಮುಖವನ್ನು ನೋಡಿದೊಡನೆಯೆ ಹೊಳೆಯಿತು ಶೀನುವು ಲಾಲನೆ-ಪಾಲನೆಗಳಿಲ್ಲದೆ ಇರುವನು. ಯೋಗ್ಯಳೂ ವಿದ್ಯಾವತಿಯೂ ಆದಂಥ ಕನ್ಯೆಯರು ತಮ್ಮ ಸಮುದಾಯದಲ್ಲಿ ಕಡಿಮೆಯಿರುವುದಿಲ್ಲ ಈ ಕಾರ್ಯವನ್ನು ಕುರಿತು ನೀನು ಆಲೋಚಿಸತಕ್ಕದು" ಎಂದು ಮಾವನು ದೀರ್ಘವಾದ ಒಂದು ಉಪನ್ಯಾಸ ಮಾಡಿದನೆಂದೇ ಹೇಳಬಹುದು

ಅಣ್ಣನು ಮಾತಾಡದೆ ತನ್ನ ಎದುರಿರುವ ಗೋಡೆಯನ್ನು ನೋಡುತ್ತಲಿದ್ದನು. ಅವನ ವದನಮಂಡಲದಲ್ಲಿ ಹಲವು ಬಗೆಯ ವಿಕಾರಗಳು ಸಂಚಾರವಾಗುತ್ತಲಿದ್ದುವೆಂದು ನನ್ನ ಊಹನೆಯು. ಆಗ ಅವನು ಆ ಕಾರ್ಯವನ್ನು ಕುರಿತು ಆಲೋಚಿಸುವನೆಂದು ಮಾತ್ರ ನುಡಿದನು.

———

[೩]

ಕ್ರಿಸ್‌ಮಸ್ ರಜಾಕಾಲವು ಬಂದಿತು ರಜಾಕಾಲದಲ್ಲಿ ಮನೆಯನ್ನು ಬಿಟ್ಟು ತ್ಯಜಿಸದಿದ್ದ ಅಣ್ಣನು ಈ ಸಮಯದಲ್ಲಿ ಒಂದು ಪ್ರವಾಸಕ್ಕೆ ಹೊರಟನು. ಇದೇನು, ಕುದುರೆ ಕೊಂಬುಗಳು ಮೊಳೆತವೇ! ಎಂದು ನಾನು ವಿಚಾರಿಸಿದೆನು. ಕಾರಣವು ಕುದುರೆಗೆ ಕೊಂಬು ಮೊಳೆತಾಗಲೇ ಅಣ್ಣನು ಮನೆಯನ್ನು ತ್ಯಜಿಸಿ ಪ್ರವಾಸವನ್ನು ಮಾಡುವುದೆಂಬುದಾಗಿ ನಾನು ಇದುವರೆಗೆ ಬಗೆದಿದ್ದೆನು.

ಒಂದು ದಿನ ಬೆಳಗ್ಗೆ ರೀವಿಯಿಂದ ಮುಖಕ್ಷೌರವನ್ನು ಮಾಡಿಕೊಂಡು ಅಗಸನಿಂದ ಒಗೆಸಿ ತರಿಸಿದ ವಸ್ತ್ರಗಳನ್ನು ಧರಿಸಿಕೊಂಡು ಅವನು ಹೊರಟನು ಬಸ್ಸು ಸ್ಟೇಂಡಿನ ವರೆಗೆ ನಾನೂ ತೆರಳಿದೆನು. ಅವನು ತನ್ನೊಡನೆ ಎರಡು-ಮೂರು ಜೊತೆ ಒಗೆದ ವಸ್ತ್ರಗಳು ತುಂಬಿದ ಸೂಟುಕೇಸು, ಒಂದು ಹಾಸಿಗೆಯ ಗಂಟು ಇವುಗಳನ್ನು ತೆಗೆದುಕೊಂಡಿದ್ದನು. ಅವನು ಬಸ್ಸ್‌ಸ್ಟೇಂಡಿನಲ್ಲಿ ತಾನು ಪ್ರವಾಸದಿಂದ ಹಿಂದಿರುಗಿ ಬರುವ ವರೆಗೆ ಯಾವ ತುಂಟತನಕ್ಕೂ ತೆರಳದೆ, ಮರ್ಯಾದೆಯಿಂದ ಜೀವಿಸಬೇಕೆಂದು ನನಗೆ ಪ್ರತ್ಯೇಕ ಉಪದೇಶಗಳನ್ನು ನೀಡಿದನು. ಎಲ್ಲಿಗೆ ಹೋಗುವುದೆಂಬುದಾಗಿ ಪ್ರಶ್ನಿಸಲು ನನಗೆ ಧೈರ್ಯ ಸಾಲದು. ಬಸ್ಸು ಕಣ್ಮರೆಯಾಗುವ ವರೆಗೆ ನಾನು ನಿಂತಿದ್ದೆನು.

ಬಸ್ಸು ತೆರಳಿದ ನಂತರ, ಒಂದಾಣೆಯನ್ನು ಕೊಟ್ಟು ಕಡ್ಲೇಕಾಯಿ ಪಡೆದು, ಜೇಬಿನಲ್ಲಿ ಅವುಗಳನ್ನು ತುಂಬಿಸಿ ವಿರಾಮದಲ್ಲಿ ನಾನು ರಾಜಾಸೀಟಿನ ಕಡೆಗೆ ಗಮಿಸಿದೆನು. ನಮ್ಮ ಊರಿನಲ್ಲಿ—ಮಡಿಕೇರಿಯಲ್ಲಿ—,ರಾಜಾಸೀಟು ನಮಗೆ ಅತ್ಯಂತ ಪ್ರೀತಿಯ ಸ್ಥಳವಾಗಿದ್ದಿತು. ಅಲ್ಲಿ ಒಂದು ಗುಡ್ಡದ ತುದಿಯಲ್ಲಿರುವ ಮರದ ಛಾಯೆಯಲ್ಲಿ ಕುಳಿತು, ಸೃಷ್ಟಿಸೌಂದರ್ಯವನ್ನು ಸವಿಯುವುದು ನನಗೆ ಅತ್ಯಂತ ಪ್ರೀತಿಯ ಕೆಲಸವಾಗಿದೆ ಈಗ ೨೪-೨೫ ವರ್ಷ ಪ್ರಾಯದ ಯುವಕನಾದರೂ, ನಮ್ಮ ಊರಿಗೆ ತೆರಳಿದರೆ, ನಾನು ಚಿಕ್ಕ ಬಾಲಕನಾಗಿದ್ದಾಗ ವರ್ತಿಸುತ್ತಲಿದ್ದಂತೆ ಒಂದಾಣೆಯ ಕಡ್ಲೇಕಾಯಿಯನ್ನು ಜೇಬಿನಲ್ಲಿ ತುಂಬಿಸಿಕೊಂಡು ರಾಜಾಸೀಟಿಗೆ ತೆರಳಿ, ಆ ಹಳೆಯ ಮರದ ನೆರಳಿನಲ್ಲಿ ಕುಳಿತು, ಕಡ್ಲೇಕಾಯಿಗಳ ಸಿಪ್ಪೆಯನ್ನು ಸುಲಿದು ಒಂದೊಂದನ್ನಾಗಿ ಬಾಯಿಗೆ ಹಾಕಿಕೊಳ್ಳುತ್ತ, ಉನ್ನತವಾದ ಆ ಗಿರಿ ಪ್ರದೇಶಗಳಲ್ಲಿ ತೋರುತ್ತಿರುವ ನೈಸರ್ಗಿಕವಾದ ಸೃಷ್ಟಿಯ ಸೊಬಗಿನ ಜೇನನ್ನು ಸವಿಯುವುದು ನನ್ನ ಅಭ್ಯಾಸವಾಗಿ ಹೋಗಿದೆ. ಅಲ್ಲಿಗೆ ತೆರಳಿದಾಗ ಬಾಲ್ಯದಲ್ಲಿ ನನ್ನಲ್ಲಿ ಉಕ್ಕಿ ಹರಿಯುತ್ತಿದ್ದ ಉನ್ಮೇಷ, ಹರ್ಷ ಇವುಗಳು ಹಿಂದಿರುಗಿ ಬಂದು ನನ್ನನ್ನು ಪುನಃ ಒಬ್ಬ ಹುಡುಗನನ್ನಾಗಿಯೇ ಮಾಡುವುವು. ಅಲ್ಲಿನ ಸೃಷ್ಟಿಸಂಪತ್ತು ಸಂಸಾರದ ಬೆಂಕಿಯಲ್ಲಿ ಬೆಂದು ಬೂದಿಯಾಗುತ್ತಿರುವ ನರಹೃದಯಕ್ಕೆ ಸ್ವಲ್ಪ ನೀರ ಶಾಂತಿಯ ಶೀತಲ ಜಲವನ್ನೆರಚಿ, ಮನಸ್ಸಿಗೆ ನೆಮ್ಮದಿಯನ್ನು ನೀಡುವುದರಲ್ಲ ಪರ್ಯಾಪ್ತವಾಗಿರುವುದು.

ನಾನು ಕಡ್ಲೇಕಾಯಿಯ ಸಿಪ್ಪೇ ಸುಲಿದು ಒಂದೊಂದಾಗಿ ಬಾಯಲ್ಲಿ ಹಾಕಿ

ಕೊಳ್ಳುತ್ತ, ಆ ಹಳೇಮರದ ಛಾಯೆಯಲ್ಲಿ ಮಲಗಿಕೊಂಡೆನು. ಮೇಲ್ಗಡೆ ಅಲ್ಲಲ್ಲಿ ಮೋಡಗಳೆಂಬ ಹಡಗುಗಳಿಂದ ತುಂಬಿದ ನೀಲಾಕಾಶವು ನನ್ನ ಕಣ್ಣುಗಳಿಗೆ ಗೋಚರವಾಗುತ್ತಿರುವುದು. ಒಂದಕ್ಕಿಂತ ಒಂದು ಎತ್ತರವಾಗಿ ತೋರುತ್ತಿರುವ ಪರ್ವತ ಶ್ರೇಣಿಗಳ ಸಾಲುಗಳು ಕೊಡಗು ನಾಡಿನ ಕಂಠಾಭರಣಗಳಂತೆ ಬೆಳಗುತ್ತಲಿರುವುವು. ಎದುರಿಗೆ ಬಂದು ಮಹಾಭೂತದಂತೆ ನಿಂತಿರುವ ಉಡುವತ್ತು ಮೊಟ್ಟೆಯು (ಒಂದು ಗುಡ್ಡದ ಹೆಸರು)ಲ್ಲಿ ಹಬ್ಬಿರುವ ಮಾರ್ಗದಲ್ಲಿ ಬರುತ್ತಿರುವ ಒಂದೆರಡು ಮಂದಿ ಪಥಿಕರು ನನ್ನ ದೃಷ್ಟಿಯನ್ನು ಸೆಳೆಯುತ್ತಲಿರುವರು. ಹಾವು ಹರಿದಂತೆ, ಅಂಕುಡೊಂಕಾಗಿ ತೆರಳುತ್ತಿರುವ ಮಂಗಳೂರಿನ ದಾರಿಯಲ್ಲಿ ಅತ್ಯಂತ ವೇಗವಾಗಿ "ಭೊಂ ಭೊಂ" ಎಂದು ಗರ್ಜಿಸುತ್ತ, ಪ್ರಯಾಣಿಕರನ್ನು ಹೊತ್ತುಕೊಂಡು ಬರುತ್ತಿರುವ ಬಸ್ಸೊಂದು ಮಡಿಕೇರಿಗೆ ಆಗಮಿಸುತ್ತಲಿರುವದು ಬೈಲುಗಳಲ್ಲಿ ಬೆಳೆದು ನಿಂತಿರುವ ಪೈರುಗಳು ಪ್ರಕೃತಿದೇವಿಯು ಕಂಠದಲ್ಲಿ ಅಲಂಕಾರಪ್ರಾಯವಾದ ಪದಕಗಳಂತೆ ಶೋಭಿಸುತ್ತಲಿರುವುವು. ತಂಪಾದ ತಂಗಾಳಿಯು ಶ್ರಮದ ಆಯಾಸವನ್ನು ಪರಿಹರಿಸುತ್ತಲಿರುವುದು ಅತ್ಯಂತ ಮನೋಹರವಾದ ಈ ಸೊಬಗಿನ ರಾಶಿಯನ್ನು ಸವಿಯುತ್ತ, ನಾನು ನಿದ್ರಾಂಗನೆಗೆ ಪರವಶನಾದೆನು.

ಅದೆಷ್ಟು ನೇರ ನಾನು ನಿದ್ರೆಯಲ್ಲಿ ಬಿದ್ದಿದ್ದೆನೆಂಬುದು ನನಗೆ ಹೊಳೆಯದು. ನಾನು ಜಾಗೃತನಾದಾಗ, ಪಶ್ಚಿಮಭಾಗದಲ್ಲಿರುವ ಕ್ರಿಶ್ಚಿಯನ್ನರ ಸ್ಮಶಾನದ ತುದಿಯಲ್ಲಿ ದಿವಾಕರನು ಬೆಳಗುತ್ತಲಿದ್ದನು ಸಮಯವು ಮೂರು ತಾಸುಗಳಾಗಿರಬಹುದೆಂದು ನಾನು ಊಹಿಸಿದೆನು. ಹೊಟ್ಟೆಯಲ್ಲಿ ಹಸಿವೆಯು ತಾಳಹಾಕುತ್ತಲಿದ್ದಿತು. ಮನೆಗೆ ಒಂದೆರಡು ಮೈಲುಗಳ ಅಂತರವಿದೆಯಲ್ಲ! ಎಂದು ನುಡಿಯುತ್ತ, ಮಾರ್ಗವನ್ನು ಸೇರಿದೆನು.

ಆಕಾಶದಲ್ಲಿ ಗೋಪುರಗಳನ್ನು ಚಿತ್ರಿಸುತ್ತ, ಮೆಲ್ಲನೆ ನಗರದ ಕಡೆಗೆ ಸಾಗುತ್ತಲಿದ್ದೆನು ಹಿಂದಿನಿಂದ "ಏನಯ್ಯಾ ಶ್ರೀನಿವಾಸಮೂರ್ತಿ, ಸ್ಟೀಂ ರೋಲರ್ (Steam Roller) ತೆರಳುವ ಹಾಗೆ ನಡೆಯುತ್ತಿರುವೆ?" ಎಂದು ಒದರಿದ ಸಪ್ಪಳವು ನನ್ನನ್ನು ವಿಚಾರಲೋಕದಿಂದ ಎಚ್ಚರಿಸಿತು. ನಾನು ಹಿಂದಿರುಗಿ ನೋಡಿದೆನು, ಆಪ್ತಮಿತ್ರ ಸುಬ್ಬುವು ಬರುತ್ತಲಿದ್ದಾನೆ.

"ಏನಯ್ಯಾ ಸುಬ್ಬೂ!"

"ಏನೂ ಇಲ್ಲ ಕಣೋ! ಊರಿಗೆ ಹೋಗಿದ್ದೆ. ಹಿಂದಿರುಗಿ ಬರುತ್ತಿರುವೆನು. ನೀನೆತ್ತ ತೆರಳಿದ್ದಿ?" ಎಂದನು ಸುಬ್ಬು

ಸುಬ್ಬು ನನಗಿಂತ ಒಂದೆರಡು ವರ್ಷ ಹೆಚ್ಚು ಪ್ರಾಯದವನಿರಬಹುದು. ನಾಲ್ಕನೆಯ ತರಗತಿಯಲ್ಲಿ ಓದುತ್ತಲಿದ್ದಾನೆ. ನಮ್ಮಿಬ್ಬರಲ್ಲಿ ಸ್ನೇಹವು ಜಾಸ್ತಿ ಬರೀ ಕಡ್ಲೇಕಾಯಿ ಸ್ನೇಹಿತರೆಂದು ತಿಳಿಯಬೇಡಿರಿ ಭಾರತದ ಕತೆಯಲ್ಲಿ ಕೃಷ್ಣಾರ್ಜುನರು, ಕರ್ಣ-ದುರ್ಯೋಧನರು ಇವರ ಮೈತ್ರಿ ಇದ್ದ ಹಾಗೆ. ಅವನ ವಾಸ

ಹಾಸ್ಟೆಲಿನಲ್ಲಿ; ನಾನು ಮನೆಯಲ್ಲಿ; ಆದರೆ ನಮ್ಮಿಬ್ಬರ ಸ್ನೇಹಕ್ಕೆ ಯಾವ ಪ್ರತಿ ಬಂಧವೂ ಇಲ್ಲ. ಈಗ ನಾನು ಕಂಪನಿಯ ನೌಕರನಾಗಿದ್ದರೂ, ಅವನು ಹದಿನಾರಾಣೆ ಕಾಂಗ್ರೆಸ್ಸಿಗಾರನಾಗಿದ್ದರೂ ಬಾಲ್ಯದಲ್ಲಿದ್ದ ಮೈತ್ರಿಯು ಈಗಲೂ ನಮ್ಮಲ್ಲಿ ನೆಲೆ ನಿಂತಿರುವುದು.

"ಎಲ್ಲಿಗೂ ಇಲ್ಲ. ರಾಜಾಸೀಟಿಗೆ ಹೋಗಿದ್ದೆ. ಹಾಗೆಯೇ ಹಿಂದಕ್ಕೆ ಬರುತ್ತಿದ್ದೇನೆ"

"ಈ ಉರಿ ಬಿಸಿಲಿನಲ್ಲಿ ಯಾವ ತರದ ವಾಕಿಂಗಪ್ಪ ನಿನ್ನದು!"

"ಈಗಲ್ಲ; ಬೆಳಗ್ಗೆ ಹೋದದ್ದು ಕಣೋ. ನಮ್ಮ ಹಳೇ ಮರವಿದೆಯಲ್ಲ? ಅದರ ನೆರಳಿನಲ್ಲಿ ಸ್ವಲ್ಪ ಕುಳಿತಿದ್ದೆ. ಹಾಗೆಯೇ ನಿದ್ರೆ ಬಂದುಬಿಟ್ಟಿತು. ಈಗ ತಾನೇ ಎಚ್ಚರವನ್ನು ಹೊಂದಿದೆನು. ಹೊಟ್ಟೆ ಹಸಿತಾ ಇದೆ."

"ಭಲಾ! ಬೇಷ್! ಒಳ್ಳೆ ವೀರ ಕಾಣಯ್ಯಾ ನೀನು! ನಡೆ ಹೋಗೋಣ" ಎಂದು ನುಡಿದನು ಸುಬ್ಬು.

ಇಬ್ಬರೂ ನಡೆದೆವು ಪೇಟೆಯ ಕಡೆಗೆ. ಒಂದೊಂದು ಮಾತುಗಳನ್ನಾಡುತ್ತ, ಮಾಸ್ತರುಗಳನ್ನು ದೂಷಿಸುತ್ತ (ಇದು ನಮ್ಮ ಅಭ್ಯಾಸ ಇಬ್ಬರು ವಿದ್ಯಾರ್ಥಿಗಳು ಕಲೆ ತರೆ, ಗುರುದೂಷಣೆ ಎಂಬ ನಾಂದಿಯಿಲ್ಲದೆ ಅವರ ಸಂಭಾಷಣೆಯು ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಮುಂದೆ ಸಾಗದು. ಈಗಲಾದರೂ ಹಾಗೆಯೇ ಎಂದು ಭಾವಿಸುತ್ತಿದ್ದೇನೆ) ದಾರಿಯಲ್ಲಿ ಕಾಣುವವರನ್ನು ಹಾಸ್ಯ ಮಾಡುತ್ತ ಮುಂದೆ ಸಾಗಿದೆವು

ಹತ್ತಿರದ ಹೋಟೆಲು ಒಂದನ್ನು ನುಗ್ಗಿ, ಕಾಫೀ ವಡೆ ಇವುಗಳಿಂದ ಹಸಿದು ರೇಗಿರುವ ಉದರದೇವತೆಯನ್ನು ಪೂಜಿಸಿ ಸಂತೃಪ್ತಿಗೊಳಿಸಿದೆವು. ನನ್ನ ಜೇಬಿನಲ್ಲಿ ಕಾಸಿರಲಿಲ್ಲ; ಉದಾರಿಯಾದ ಸುಬ್ಬನೇ ಕಾಫೀ ಕುಡಿದ ಕಾಸುಗಳನ್ನು ಕೊಟ್ಟನು. ಹಸಿವೆಯು ನಿಂತೊಡನೆಯೇ ಮನೆಗೆ ತೆರಳಬೇಕೆಂಬ ವಿಚಾರವು ನನ್ನ ತಲೆಯೊಳಗಿನಿಂದ ಮಾಯವಾಯಿತು "ನಡೆ ಹೋಗೋಣ, ಪೇರೇಡು ಮೈದಾನಕ್ಕೆ" ಎಂದು ಗರ್ಜಿಸಿದನು ಸುಬ್ಬು. ಹಸುವನ್ನು ಹಿಂಬಾಲಿಸುವ ಕರುವಿನಂತೆ ನಾನು ಅವನನ್ನು ಅನುಸರಿಸಿದೆನು.

ಗಣೇಶಬೀದಿಗಾಗಿ ನಾವು ಸಂಚಾರವನ್ನು ಮುಂದುವರಿಸಿದೆವು. ಅರ್ಧ ಡಜನ್ ವಡೆಗಳನ್ನು ಹೊಟ್ಟೆಯೊಳಗೆ ಭದ್ರಪಡಿಸಿದ ಸುಬ್ಬುವಿಗೆ ಅತ್ಯಂತ ದಾಹ ವಾಗಿರಬೇಕೆಂದು ತೋರುತ್ತದೆ. ಹತ್ತಿರದ ನಲ್ಲಿಯ ಬಳಿಗೆ ನೀರು ಕುಡಿಯುವುದಕ್ಕಾಗಿ ಅವನು ತೆರಳಿದನು ಒಂದು ಅಂಗಡಿಯ ಜಗುಲಿಯಲ್ಲಿ ನಾನು ಕುಳಿತುಕೊಂಡೆನು. ಆ ಮಹಾರಾಯನು ಮರ್ಯಾದೆಯಿಂದ ನೀರು ಕುಡಿದು ಹಿಂದಿರುಗಬೇಡವೇ? ಅಲ್ಲಿಯೂ ಅವನು ತನ್ನ ತುಂಟತನವನ್ನು ನಡಸಿಯೇ ಬಿಟ್ಟನು. ನಲ್ಲಿಯಲ್ಲಿ ನೀರು ತುಂಬಲು ಹತ್ತಿರದ ಮನೆಯವರು ಒಂದು ಕೊಡವನ್ನು ಮಡಗಿದ್ದರು. ಸುಬ್ಬುವು ನೀರನ್ನು ಕುಡಿದ ನಂತರ ಒಂದು ಕಲ್ಲನ್ನು ತೆಗೆದು ಆ ಕೊಡದ ಮೇಲೆ

ಎಸೆದನು. ಅದು ನೂರು ಚೂರುಗಳಾಗಿ ಹೋಯಿತು. ಈ ದೃಶ್ಯವನ್ನು ಕಂಡು ಹತ್ತಿರದ ಮನೆಯ ಶೂರ್ಪಣಖಿಯು (ಆ ಹೆಸರನ್ನು ನಾನೇ ಕೊಟ್ಟಿದ್ದು. ಅವಳ ರೂಪವೂ ವರ್ತನೆಯೂ ಭಯಂಕರವಾಗಿದ್ದುದರಿಂದ, ಆ ಹೆಸರನ್ನು ನಾನೇ ನಾಮಕರಣ ಮಾಡಿದೆನು.) ಒಂದು ಒನಕೆಯನ್ನು ಕೈಯಲ್ಲಿ ಹಿಡಿದು ಭದ್ರಕಾಳಿಯಂತೆ ಅರಚುತ್ತ ಸುಬ್ಬುವನ್ನು ಹಿಂಬಾಲಿಸಿದಳು; ಆದರೆ ಅವಳಿಗೆಲ್ಲಿ ಸಿಗುವನು ಆ ಮಹಾರಾಯಾ! ನೂರು ಮೈಲು ಸ್ಪೀಡಿನ (Speed) ಕಾರಿಗಿಂತಲೂ ವೇಗವಾಗಿ ಸುಬ್ಬುವು ಪಲಾಯನ ಸೂತ್ರವನ್ನು ಹಿಡಿದನು. ಆ ಹೆಂಗುಸು ಹತ್ತು ಮಾರುಗಳ ಪರ್ಯಂತ ಅವನನ್ನು ಹಿಂಬಾಲಿಸಿದ ನಂತರ ಅವನು ತನ್ನ ಕೈಗೆ ಸಿಗನೆಂದು ಊಹನೆಯಾಗಿರಬಹುದು ಅದರಿಂದ ಬಳಲಿ ಬೇಸತ್ತವಳಾಗಿ ಹಿಂದಿರುಗಿದಳು. ಅವಳ ಬಾಯಿಯಿಂದ ಸಹಸ್ರ ನಾಮ ಮಂತ್ರೋಚ್ಚಾರಣೆಯು ಸಾಂಗವಾಗಿ ನಡೆಯುತ್ತಲಿದ್ದಿತು. ಹೊಟ್ಟೆ ತುಂಬ ನಗುತ್ತ ನಾನು ಸುಬ್ಬುವನ್ನು ಹಿಂಬಾಲಿಸಿದೆನು.

ಆ ದಿನ ವಿಶೇಷವಾದ ಬೇರೆ ಯಾವ ಸಂಗತಿಗಳೂ ನಡೆಯಲಿಲ್ಲ ಹಂಪಿನ ಕೆರೆ, ಪೇರೇಡ ಗ್ರಾವುಂಡ (ನಮ್ಮೂರಿನ ಒಂದು ಮೈದಾನದ ಹೆಸರು) ಇವುಗಳನ್ನು ಸುತ್ತಿ ನಡೆದು, ಬೀದಿಯ ಬಸವಣ್ಣನ ಹಾಗೆ ಸಾಯಂಕಾಲ ಏಳು ಗಂಟೆ ವೇಳೆಯಲ್ಲಿ ಮನೆಯನ್ನು ಸೇರಿದೆನು. ಬೆಳಗ್ಗೆ ಎಂಟು ಗಂಟೆತೆ ಅಣ್ಣನನ್ನು ಬಸ್ಸಿನಲ್ಲಿ ಕಳುಹಿಸಲು ಹೊರಟ ಭೂಪತಿಯು ನಾನಾಗಿದ್ದೆನು. ಮನೆಯೊಳಗೆ ಪ್ರವೇಶಿಸಿದೊಡನೆಯೇ ನಮ್ಮ "ಅತ್ತೆ"ಯು "ಶುಕ್ಲಾಂಬರ ಧರಂ" ಎಂದು ಹಾಡಲು ಪ್ರಾರಂಭಿಸಿದಳು. ವಿಷ್ಣು ಸಹಸ್ರನಾಮವನ್ನು ಅಲ್ಲ ಅವಳು ಹಾಡಿದ್ದು. ನನಗೆ ಅಮೂಲ್ಯವಾದ ಬಯ್ಗುಳ ಉಪಹಾರವನ್ನಾಗಿದ್ದಿತು ಅವಳು ಅರ್ಪಿಸಿದುದು. ಒಂದು ಸಹಸ್ರನಾಮ ಮಂತ್ರದ ಪಾರಾಯಣವೇ ನಡೆಯಿತೆಂದು ಹೇಳಬೇಕು. ಅವಳು ಆಗ ನುಡಿಯುತ್ತಿರುವ ವಚನಗಳನ್ನು ಕೇಳಿದ್ದರೆ, ನಾನು ಯಾವುದೋ ಒಂದು ಭಯಂಕರ ಕೃತ್ಯವನ್ನು ಗೈದ ರಾಕ್ಷಸನೆಂದು ಊಹಿಸಬೇಕಾಗಿ ಬರುತ್ತಲಿದ್ದಿತು ನಾನಾವುದಕ್ಕೂ ಉತ್ತರವನ್ನು ನೀಡಲಿಲ್ಲ. ಅವಳ ಶಬ್ದಕೋಶವು ಬರಿದಾಗುವವರೆಗೆ ನಾನು ನನ್ನ ಕೋಣೆಯೊಳಗೆ ಪ್ರವೇಶಿಸಿ ಮೌನವಾಗಿ ಕುಳಿತೆನು

ಈ ರೀತಿ ಆ ದಿನವು ಗತಿಸಿತು ಮರುದಿನವೂ ನೆಮ್ಮದಿಯಿಂದ ಕಾಲಹರಣ ಮಾಡುವ ವಿಚಾರವು ನನಗೆ ಹೊಳೆಯಲಿಲ್ಲ ಮೊದಲೇ ನಾನು ಸ್ವಭಾವತಃ ಒಬ್ಬ ತುಂಟನಾಗಿರುವೆನೆಂದು ತಿಳಿಸಿರುವೆನಷ್ಟೆ? ಹಾಸಿಗೆಯಿಂದ ಯಾವ ಮಹತ್ಕೃತ್ಯವನ್ನು ಮಾಡಬೇಕೆಂದು ವಿಚಾರಿಸುತ್ತ ಎದ್ದೆನು. ಸಾಹಸ ಕಾರ್ಯಗಳಿಗೆ ಇಷ್ಟು ಅನುಕೂಲವಾದ ಬೇರೊಂದು ವೇಳೆಯಿರುವುದಿಲ್ಲವೆಂಬುದನ್ನು ನಾನು ಮರೆತಿರಲಿಲ್ಲ. ರಜಾಕಾಲ; ವಿರಾಮವಾಗಿ ಬೇಕಾದಲ್ಲಿ ಸಂಚರಿಸಬಹುದು. ಮನೆಯಲ್ಲಿ ಅಣ್ಣನಿರುವುದಿಲ್ಲ; ಸರ್ವ ಸ್ವತಂತ್ರನು ನಾನಾಗಿರುವೆನು. ಮನೆಯಲ್ಲಿ "ಅತ್ತೆ" ಯಿರಲಿ, ಅದಕ್ಕೇನು? ಅವಳಿಗೆ ಬೆದರುವ ಆಸಾಮಿಯು ನಾನಲ್ಲ. ಹೆಂಗಸರಿಗೆ ಶಿರವನ್ನು

ಬಾಗಿಸೆನೆಂಬ ಜಂಭವು ನನ್ನಲ್ಲಿ ಧಾರಳವಾಗಿಯೇ ಇದೆ. ಬೇಗನೆ ಕಾಫಿಯುನ್ನು ಕುಡಿದು 'ಅತ್ತೆ'ಗೆ ಕಾಣದಂತೆ ಕ್ಯಾಬಿನೆಟ ಫೋಟಿಂಗಿಗೆಂದು ಹಾಸ್ಟೇಲಿಗೆ ತೆರಳಿದೆನು.

ನಾನು ಹಾಸ್ಟೇಲಿಗೆ ತೆರಳಿದಾಗ ಎಂಟು ಗಂಟೆಯಾಗಿರಬಹುದು. ಸುಬ್ಬನು ಇನ್ನೂ ಹಾಸಿಗೆಯಿಂದ ಎದ್ದಿರಲಿಲ್ಲ ರಜಾಕಾಲವಾದುದರಿಂದ, ವಿದ್ಯಾರ್ಥಿಗಳೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿರುವರು. ಹಾಸ್ಟೆಲಿನಲ್ಲಿ ಸುಬ್ಬು ಒಬ್ಬನು ಮಾತ್ರ ಇದ್ದನು. ನಾನು ಅವನನ್ನು ನಿದ್ರಾಂಗನೆಯ ಪಾಶಗಳಿಂದ ವಿಮುಕ್ತನನ್ನಾಗಿ ಮಾಡಿದೆನು. "ಏನು, ಕುಂಭಕರ್ಣನ ಹೊಸ ಅವತಾರವೇನಿದು?" ಎಂದೆನು ನಾನು.

"ಸುಮ್ಮನಿರಯ್ಯಾ! ನೆಮ್ಮದಿಯಿಂದ ನಿದ್ರಿಸಲೂ ನಿನ್ನ ಕಾಟಾಚಾರದಿಂದ ಸಾಧ್ಯವಿಲ್ಲ." ಎಂದು ಗುಣುಗುತ್ತಾ ಅವನು ಹಾಸಿಗೆಯಿಂದ ಎದ್ದನು. ಮುಖವನ್ನು ತೊಳೆದುಕೊಂಡು ಬಂದ ನಂತರ:—"ಏನಯ್ಯಾ, ಇಷ್ಟು ಜಾಗ್ರತೆಯಾಗಿ ಹೊರಟಿರುತ್ತಿ?" ಎಂದು ಮಂಗನ ಹಾಗೆ ನನ್ನ ಕಡೆಗೆ ನೋಡುತ್ತ ಪ್ರಶ್ನಿಸಿದನು.

"ಏನೂ ಇಲ್ಲ ಕಣೋ, ಮನೆಯಲ್ಲಿ ಬಹಳ ಬೇಸರವಾಗುತ್ತೆ. ನಿನ್ನೊಡನೆ ಮಾತಾಡುತ್ತ ಹೊತ್ತನ್ನು ಕಳೆಯೋಣ ಎಂದು ಬಂದೆನು" ಎಂದು ನನ್ನ ಜವಾಬು ಹೊರಬಿದ್ದಿತು. ಅವನು ಹೋಗಿ ತನ್ನ ಪ್ರಾತಃಕಾಲದ ಉದರಾರ್ಚನಾವಿಧಿಯನ್ನು ನೆರವೇರಿಸಿಕೊಂಡು ಬಂದನು

"ಇವತ್ತಿನ ಪ್ರೊಗ್ರಾಮು ಏನು?" ಎಂದೆ ಉತ್ಸುಕತೆಯಿಂದ.

"ಬೆಳಗ್ಗಿನಿಂದಲೇ ತುಂಟತನದ ಹಂಚಿಕೆಯೇ! ನಿನ್ನೆಯ ದಿನದ ಸಂಚಾರದಿಂದ ಮೈಕೈಗಳು ನೋವಾಗುತ್ತಲಿವೆ."

"ಸಾರವಿಲ್ಲ ಮಹಾರಾಯಾ!-ಏನಾದರೂ 'ಮೋಜಿ'ಲ್ಲದೆ ಹೋದರೆ ಸುಖವಿಲ್ಲ. ಇದಕ್ಕಿಂತ ಸುಸಂದರ್ಭವು ಬೇರೊಂದು ನನಗೆ ಲಭಿಸಲಾರದು."

"ಅದಕ್ಕೇನಯ್ಯ ಇಷ್ಟು ಅವಸರ!" ಎಂದು ಉದಾಸೀನಭಾವದಲ್ಲಿಯೇ ಅವನು ನುಡಿದನು ನಾನು ಮಾತಾಡಲಿಲ್ಲ ಅವನ ಹಾಸಿಗೆಯ ಮೇಲೆ ಕುಳಿತೆನು.

ಹತ್ತು ಗಂಟೆಯ ವರೆಗೆ ನಾವು ಹರಟೆಯನ್ನು ಹೊಡೆಯುತ್ತ ಕಾಲವನ್ನು ಕಳೆದವು. ಅನಂತರ ನಾವಿಬ್ಬರೂ ಹೊರಟೆವು ಬೇಟೆಯನ್ನು ಹುಡುಕುವದಕ್ಕಾಗಿ. ವೀರರಾಜೇಂದ್ರ ಪೇಟೆಯ ಮಾರ್ಗದಲ್ಲಿ ಮೂರು ಮೈಲುಗಳ ದೂರ ನಡೆದವು. ಆಗ ಎಡಬದಿಯಲ್ಲಿದ್ದ ಒಂದು ಕಿತ್ತಲೆಯ ತೋಟವು ನಮ್ಮ ದೃಷ್ಟಿಯನ್ನು ಆಕರ್ಷಿಸಿತು. ಗಳಿತು ಕೆಂಪಗೆ ತೂಗುತ್ತಿರುವ ಹಣ್ಣುಗಳನ್ನು ಕಂಡೊಡನೆಯೇ ನನ್ನ ನಾಲಿಗೆಯಿಂದ ನೀರು ಹರಿಯಲಾರಂಭಿಸಿತು. "ಅಲ್ಲಿ ನೋಡು" ಎಂದೆನು.

"ಹಣ್ಣುಗಳು ಬಹು ಚೆನ್ನಾಗಿವೆ ಕಾವಲುಗಾರರು ಇರುವರೋ ಏನೋ?" ಎಂದನು ಸುಬ್ಬು ನಾವಿಬ್ಬರೂ ಬಹು ಎಚ್ಚರಿಕೆಯಿಂದ ತೋಟದ ಸಮೀಪಕ್ಕೆ ಹೋಗಿ ಹುಡುಕಿದೆವು. ತೋಟದಲ್ಲಿ ಒಬ್ಬ ಮಾಪಿಳ್ಳೆ ಕಾವಲುಗಾರನು ನಿಂತಿರುವುದು ನಮ್ಮ ಲೋಚನಗಳಲ್ಲಿ ಪತಿಸಿತು, ಬೇರೆ ಯಾವ ಜಾತಿಯಾದರೂ ಚಿಂತೆ

ಯಿಲ್ಲ; ಈ ಜಾತಿಯೆಂದರೆ. ಗಜಪೋಕುರಿಗಾಳಾದ ನಮಗೂ ಸ್ವಲ್ಪ ಭಯವೆ!

ನಾವು ಮಾರ್ಗದ ಬದಿಯಲ್ಲಿರುವ ಒಂದು ಮಾವಿನ ಮರದ ನೆರಳಿನಲ್ಲಿ ಕುಳಿತುಕೊಂಡು ಹಂಚಿಕೆಗಳನ್ನು ಮಾಡಲು ಪ್ರಾರಂಭಿಸಿದೆವು. ತನ್ನ ಐದು ವರ್ಷಗಳ ಹಂಚಿಕೆಯನ್ನು ಕುರಿತು ಆಲೋಚಿಸುತ್ತಿರುವಾಗ ಸ್ಟೇಲಿನ ಮಹಾಶಯನಾದರೂ ನಮ್ಮಷ್ಟು ದೀರ್ಘವಾಗಿ ಬುದ್ಧಿಯನ್ನು ವ್ಯಯಗೊಳಿಸಿರಲಾರನು. ವಿಚಾರಶೀಲ ವಿಚಕ್ಷಣನಾದ ಸುಬ್ಬುವಿನ ತೀಕ್ಷ್ಣಬುದ್ಧಿಗೆ ಸುಸೂಕ್ತವಾದ 'ಪ್ಲೇನ್' ದೊರಕುವದು ಪ್ರಯಾಸವಾದ ಒಂದು ಕಾರ್ಯವಲ್ಲ. ಎರಡು ನಿಮಿಷಗಳಲ್ಲಿಯೇ ಕಿತ್ತಲೇ ತೋಟವನ್ನು ಲೂಟಿ ಮಾಡುವ ಉಪಾಯವು ಹೊಳೆಯಿತು.

"ನೀನು ಬೇರೊಂದು ಭಾಗದಲ್ಲಿ ಹೋಗಿ ಹಣ್ಣುಗಳನ್ನು ಕೀಳು. ನಾನಿನ್ನೊಂದು ಕಡೆಯಲ್ಲಿ ಮೋಜು ಮಾಡುವೆನು. ಮಾಪ್ಪಿಳ್ಳೆ ನನ್ನನ್ನು ಹಿಡಿಯುವುದಕ್ಕೆ ಬಂದಾಗ, ನಾನು ಕೂಗುವೆನು ಅದನ್ನು ಕೇಳಿದೊಡನೆಯೇ ನೀನು ಮರದಿಂದ ಇಳಿದು ಅವನ ಕಣ್ಣುಗಳಿಗೆ ಗೋಚರವಾಗುವಂತೆ ಕಾಣಿಸಿಕೊಳ್ಳಬೇಕು. ಆಗ ಅವನು ನಿನ್ನನ್ನು ಬಂಧಿಸಲು ಪ್ರಯತ್ನಿಸುವನು. ಆ ವೇಳೆಯಲ್ಲಿ ಅವನ ಕರಗಳಲ್ಲಿ ಬೀಳದೆ ಪಾರಾಗಿ ಮಾರ್ಗವನ್ನು ನೀನು ಸೇರಬೇಕು. ಅದೇ ವೇಳೆಯಲ್ಲಿ ನಾನೂ ಅವನಿಗೆ ಮಂಕು ಬೂದಿ ಎರಚಿ ಬರುವೆನು." ಎಂಬ ತನ್ನ ಹಂಚಿಕೆಯನ್ನು ಸುಬ್ಬುವು ನನಗೆ ತಿಳಿಸಿದನು.

ಅವನ ನಿರ್ದೇಶದಂತೆ ನಾನು ಬೇರೊಂದು ದಾರಿಯಲ್ಲಿ ತೋಟವನ್ನು ಪ್ರವೇಶಿಸಿ ಹಣ್ಣುಗಳನ್ನು ಕೀಳತೊಡಗಿದೆನು. ಹತ್ತಿಪ್ಪತ್ತು ಹಣ್ಣುಗಳನ್ನು ಕಿತ್ತು ನನ್ನಂಗಿಯ ಜೇಬುಗಳಲ್ಲಿಯೂ ಶರಾಯಿಯ ಜೇಬುಗಳಲ್ಲಿಯೂ ತುಂಬಿಸಿಕೊಂಡೆನು. ಹಣ್ಣುಗಳನ್ನು ಒಂದೊಂದಾಗಿ ಕೀಳುತ್ತ ನಾನು ತಿನ್ನಲು ಪ್ರಾರಂಭಿಸಿದೆನು; ಆದರೆ ಬಹಳ ವೇಳೆಯವರೆಗೆ ನಿರಾಂತಕವಾಗಿ ಈ ರೀತಿ ವರ್ತಿಸಲು ಸಾಧ್ಯವಾಗಲಿಲ್ಲ. ನನ್ನ ಆಕ್ರಮಣವನ್ನು ಆ ಮಾಪ್ಪಿಳ್ಳೆ ಪಹರೆಯವನು ಬೇಗನೆ ಅರಿತನು. ಅವನು ನಾನು ಮರವನ್ನೇರಿ ಹಣ್ಣುಗಳನ್ನು ಕೀಳುತ್ತಿರುವುದನ್ನು ನೋಡಿದೊಡನೆಯೇ "ಹರಾಂ ಬದ್ಮಶನ್ನಿ" ಎಂದು ಒದರುತ್ತ, ನನ್ನ ಬಳಿಗೆ ಬಂದನು ಎಂದು ಮಾತ್ರವಲ್ಲ; ಅಧಿಕಾರಯುಕ್ತವಾದ ವಾಣಿಯಲ್ಲಿ ಮರದಿಂದಿಳಿಯಲು ಅವನು ಆಜ್ಞಾಪಿಸಿದನು. ಅಷ್ಟು ಬೇಗನೆ ಮಣಿಯುವುದಕ್ಕೆ ನಾನು ಚಿಲ್ಲರೆ ಮೂರ್ತಿಯಾಗಿರಲಿಲ್ಲ.

ನುಣ್ಣಗೆ ಬೋಳಿಸಿ ಕುಂಡೂರು ಬೆಟ್ಟದ ಹಾಗೆ(ಇದು ನಮ್ಮ ಮಡಿಕೇರಿಯಲ್ಲಿರುವ ಒಂದು ಗುಡ್ಡದ ಹೆಸರು. ಆ ಸ್ಥಳದಲ್ಲಿ ಮರಗಳಿಲ್ಲದುದರಿಂದ ದೂರಕ್ಕೆ ಮಾಪ್ಪಿಳ್ಳೆಯ ಶಿರಸ್ಸಿನಂತೆ ನುಣ್ಣಗೆ ತೋರುವದು.) ಇರುವ ಅವನ ಮಸ್ತಕದ ಮೇಲೆ ಗುರಿಯಿಟ್ಟು, ಒಂದು ಹಸೀ ಕಿತ್ತಲೇ ಕಾಯಿಯನ್ನು ಪ್ರಯೋಗಿಸಿದೆನು. ಅದು ಗುರಿ ತಪ್ಪಲಿಲ್ಲ. ಅದು ಒಳ್ಳೆ ಶಕ್ತಿಮಂತಾಗಿದ್ದಿರಬೇಕೆಂದು ತೋರುತ್ತದೆ. ಅದು ಹಸಿಮಡಿಕೆ ಬುಂತಿರುವ ಅವನ ಮಂಡೆಗೆ ತಾಗಿದೊಡನೆಯೇ ಮೇಕೆಯು ಅರಚುವಂತೆ, "ಯಾ

ಅಲ್ಲಾ" ಎಂದು ಅರಚಿದನು. ಅವನ ಆಗಲಿನ ಫಜೀತಿಯನ್ನು ಕಂಡು ನನಗೆ ನಗುವು ಬಂದಿತು. ಪುನಃ ನಾಲ್ಕೈದು ಕಿತ್ತಲೆ ಕಾಯ್ಗಳ ಪ್ರಹಾರಗಳಿಂದ ಸನ್ಮಾನಿಸಿದೆನು.

ಅವನು ನನ್ನ ಪ್ರಹಾರಗಳ ವರ್ಷಾವವನ್ನು ಸಹಿಸಲಾಗದೆ ಮರವನ್ನೇರುವ ಪ್ರಯತ್ನವನ್ನು ನಡೆಸಿದನು. ಆಗ ನಾನು ಇನ್ನು ನನಗೆ ಉಳಿಗಾಲವಿಲ್ಲವೆಂದು ತಿಳಿದೆನು. ಆದರೂ ಅಷ್ಟು ಬೇಗನೆ ಸೋಲನ್ನು ಪಡೆಯುವ ಮಗನು ನಾನಾಗಿರಲಿಲ್ಲ. ಅವನು ಮರವನ್ನೇರಿ ನನ್ನ ಸಮೀಪಕ್ಕೆ ಬಂದನೆಂದೊಡನೆಯೇ ನಾನು ಮರದಿಂದ ನೆಗೆದೆನು. ನನ್ನ ಕಾಲುಗಳು ಮುರಿಯದ್ಹೋದುದು ನನ್ನ ಮಹಾಭಾಗ್ಯವೆಂದೇ ನುಡಿಯಬಹುದು. ಮಾಪ್ಪಿಳ್ಳೆಗೆ ನನ್ನ ಹಾಗೆ ಅಷ್ಟು ಎತ್ತರದಿಂದ ಮಂಗನಂತೆ ನೆಗೆಯಲು ಧೈರ್ಯ ಬರಲಿಲ್ಲ. ಅವನು ಸಾವಕಾಶವಾಗಿ ಮರದಿಂದಿಳಿದು ಬರುವ ವೇಳೆಯಲ್ಲಿ ನಾನು ಪಲಾಯನ ಮಂತ್ರವನ್ನು ಪಠಿಸಿ ಮಾರ್ಗವನ್ನು ಸೇರಿದೆನು ನನಗಿಂತ ಮೊದಲೇ ಸುಬ್ಬುವು ತನ್ನ ಸುಲಿಗೆಯನ್ನು ಅಂಗವಸ್ತ್ರದಲ್ಲಿ ಕಟ್ಟಿಕೊಂಡು ದಾರಿಯಲ್ಲಿ ಕಾದು ನಿಂತಿದ್ದನು ಮಾಪ್ಪಿಳ್ಳೆಯು ಅಲ್ಲಿಗೆ ತಲುಪುವುದಕ್ಕೆ ಮುಂಚೆಯೇ "ಬದುಕಿಕೋ ಬಡ ಜೀವವೇ" ಎಂದು ನುಡಿಯುತ್ತ, ನಾವು ನಮ್ಮ ಕಾಲುಗಳಿಗೆ ಬುದ್ಧಿಯನ್ನು ಹೇಳಿದೆವು.

ಈಗ ನಾನು ಅನ್ಯರ ವಸ್ತುಗಳನ್ನು ಅಪಹರಿಸಬಾರದೆಂದೂ, ಆ ರೀತಿ ವರ್ತಿಸುವುದು ಘೋರವಾದ ಅಪರಾಧವೆಂದೂ ತಿಳಿದಿರುವೆನು; ಆದರೆ ನನ್ನ ಬಾಲ್ಯದಲ್ಲಿ ಅದು ತೋರಲಿಲ್ಲವೆಂದು ಮಾತ್ರವಲ್ಲ; ಇನ್ನೊಬ್ಬರ ತೋಟದಲ್ಲಿ ಪ್ರವೇಶಿಸಿ, ಹಣ್ಣುಗಳನ್ನು ಕದಿಯುವದು ಒಂದು ಮಹತ್ತಾದ ಪರಾಕ್ರಮವೆಂದು ನಾನು ಭಾವಿಸಿದ್ದೆನು.

ಒಂದು ವಾರದ ಕಾಲವು ಗತಿಸಲು ಸಂಚಾರಕ್ಕಾಗಿ ಹೋಗಿದ್ದ ನನ್ನ ಅಣ್ಣನು ಹಿಂದಿರುಗಿ ಬಂದನು. ಅವನಲ್ಲಿ ಸಾಧಾರಣವಾಗಿ ತೋರಿಬರುತ್ತಿದ್ದ ವಿಷಾದಮುಖಭಾವ, ಉದಾಶೀನತೆ ಇವೆಲ್ಲವೂ ಮಾಯವಾಗಿದ್ದವು. ಹೊಸ ತರದ ಉನ್ಮೇಷ, ಚಟುವಟಿಕೆ, ಪ್ರಸನ್ನ ಮನಃಸ್ಥಿತಿ ಇವುಗಳು ಅವನಲ್ಲಿ ತಲೆದೋರಿದ್ದುವು ಇವೇನಪ್ಪಾ, ಈ ವಿಚಿತ್ರ ಪಲ್ಲಟವೆಂದು ನಾನೇ ಹೇಳಿಕೊಂಡೆನು.

ನಮ್ಮ "ಅತ್ತೆ"ಯು ನನ್ನ ಪರಾಕ್ರಮಗಳಿಗೆ ಒಂದಿಷ್ಟು ಒಗ್ಗರಣೆಯನ್ನು ಸೇರಿಸಿ, ಅಣ್ಣನೊಡನೆ ನುಡಿಯದೇ ಇರಲಿಲ್ಲ. ಸಾಧಾರಣವಾಗಿದ್ದ ಆತನ ಸ್ವಭಾವವು ಅಂದು ಅಣ್ಣನಲ್ಲಿದ್ದಿದ್ದರೆ ನನಗೆ ಖಂಡಿತವಾಗಿಯೂ ಕಠಿಣ ಶಿಕ್ಷೆಯು ಲಭಿಸಿಯೇ ಲಭಿಸುತ್ತಲಿದ್ದಿತು; ಆದರೆ ಆ ಭೂಪತಿಯ ಸ್ವಭಾವದಲ್ಲಿ ಆನಂದ-ಹೊಸ ಆಶೆಗಳ ಹುರುಪು ಇವುಗಳು ಮೀಲನವಾಗಿದ್ದುದರಿಂದ ನಾನು ಆ ದಂಡನೆಯಿಂದ ಪಾರಾದೆನು ಅವನು ಒಳ್ಳೆಯ ನುಡಿಗಳಲ್ಲಿಯೇ, "ಶೀನು, ಇನ್ನು ಈ ರೀತಿಯ ತುಂಟತನಗಳನ್ನು ಮಾಡಬಾರದಪ್ಪ!" ಎಂದು ಉಪದೇಶಿಸಿ ಕಳುಹಿಸಿಬಿಟ್ಟನು. ಹೊಸದೊಂದು ನೃಸಿಂಹಾವತಾರವನ್ನು ಕಣ್ಣುತುಂಬಾ ನೋಡಬಹುದೆಂದಿದ್ದ "ಅತ್ತೆ"ಯ ಆಶೆಯು ಭಗ್ನಮನೋರಥವಾಯಿತೆಂದು ಇಲ್ಲಿ ನಾನು ಹೇಳಬೇಕಾದುದಿಲ್ಲ.

[೪]

ಬರುವ ಸೋಮವಾರ ಅಣ್ಣನ ಮದುವೆಯಂತೆ. ಅಣ್ಣನು ಮದುವೆಯಾಗುವದಾದರೆ ನಾನೇಕೆ ಹಿಗ್ಗಬೇಕೆಂಬುದರ ರಹಸ್ಯವು ನನಗೆ ತಿಳಿಯದು. ಮದುವೆಯೆಂಬ ಮಾತಿನ ತಾತ್ಪರ್ಯವಾಗಲಿ, ಎಲ್ಲರೂ ಮದುವೆಯನ್ನೇಕೆ ಮಾಡಿಕೊಳ್ಳುವರು ಎಂಬುದರ ಉತ್ತರವಾಗಲೀ ನನ್ನ ಹುಡುಗ ಬುದ್ಧಿಗೆ ಸಿಲುಕದು. ನಾನು ಮದುವೆಯಾಗುವಾಗಲಾದರೂ ತಿಳಿಯಬಹುದಲ್ಲ, ಎಂಬುದೇ ನನಗಿರುವ ಸಮಾಧಾನವು ಆದರೂ ನನ್ನ ಉತ್ಸಾಹಕ್ಕೇನೂ ಕಡಿಮೆ ಇರುವದಿಲ್ಲ.

ನಿಶ್ಚಿತ ದಿವಸಕ್ಕಿಂತ ಮೂರು ದಿನ ಮುಂಚೆಯೇ ಹೊರಟೆವು. ಜೊತೆಯಲ್ಲಿ ನಮ್ಮ ಮಾವನ ಮಕ್ಕಳು ಅವರೊಳಗೆ ಮಾಧುವು ನನ್ನ ಪ್ರಾಯದವನೆನ್ನಬಹುದು, ಅವನು ಒಳ್ಳೆಯ ಹುಡುಗನೆಂದು ನುಡಿಯಬಹುದು. ಈಗ ಅವನು ಒಬ್ಬ ಅಡ್ವೋಕೇಟಾಗಿರುತ್ತಾನೆ. ಅವನು ಸ್ವಲ್ಪ ಸಮಯದಲ್ಲಿಯೇ ನನ್ನ ಪರಮ ಮಿತ್ರನಾಗಿ ಹೋದನು. ಇನ್ನು ಮಾವನ ಹಿರಿಯಮಕ್ಕಳು....ಅವರಿಬ್ಬರನ್ನು ಕಂಡರೆ ನನಗೆ ಆಗುತ್ತಿರಲಿಲ್ಲ; ಅವರು ಪ್ರಾಯದಲ್ಲಿಯೂ ನನಗಿಂತ ದೊಡ್ಡವರು. ಬಿ. ಎ. ಅಂತಾರಲ್ಲ, ಆ ಕ್ಲಾಸಿನಲ್ಲಿ ಅವರಿಬ್ಬರೂ ಓದುತ್ತಲಿದ್ದಾರೆ. ನಾನು ಎಂದರೆ ಅವರಿಗೆ ಬಹಳ ತಾತ್ಸಾರವಾಗಿದ್ದೀತೆ ಅವರಿಬ್ಬರೂ ನನ್ನನ್ನು "ಗಜಪೋಕರಿ" ಎಂದು ನಾಮಕರಣ ಮಾಡಿ ಕೂಗುತ್ತಿರುವರು. ಅವರೇನು ಬಲ್ಲರು? ಬಾಲ್ಯಕಾಲದಲ್ಲಿ ಅವರೂ ನನಗಿಂತ ಮಿಗಿಲಾದ ಮಂಗಗಳಾಗಿದ್ದರೆಂಬುದಕ್ಕೆ ಸಂಶಯವಿಲ್ಲ! ಅವರಿಗೊಂದು ಪಾಠವನ್ನು ಕಲಿಸಬೇಕೆಂಬ ಆಗ್ರಹವು ನನಗೆ ಬಹಳವಾಗಿದೆ ನಾನೂ ನನ್ನ ಮಿತ್ರ ಸುಬ್ಬುವೂ ಇರುವಾಗ ಯಾವ ಭಯಕ್ಕೆ ತಾನೆ ಅವಕಾಶವಿರುವುದು? ನಾವಿಬ್ಬರೂ ವಿಚಾರಿಸಿದರೆ, ಹನುಮಂತನೆಂಬ ಮಂಗನು ಲಂಕೆಯನ್ನು ಸುಟ್ಟಂತೆ, ನಾವು ಊರನ್ನು ಸುಡಲು ಸಮರ್ಥರಾದ ವೀರರಾಗಿರುವೆವು.

ಈ ಯಾತ್ರೆಯಲ್ಲಿ ನಮ್ಮ ಬಂಧು-ಬಳಗದವರು ಬೇಕಾದಷ್ಟು ಮಂದಿ ಇದ್ದರು; ಆದರೆ ಯಾರು ಯಾರೆಂಬ ನೆನಪು ನನಗಿಲ್ಲ. ಅವರನ್ನು ಕುರಿತು ಇಲ್ಲಿ ವಿವರಿಸಬೇಕಾದ ಆವಶ್ಯವೂ ಇರುವುದಿಲ್ಲ. ಇಪ್ಪತ್ತು-ಮೂವತ್ತು ಮಂದಿ ಇದ್ದರೆಂದು ಇಲ್ಲಿ ಹೇಳಿದರೆ ಸಾಕಾಗಬಹುದು. ಅವರೊಳಗೆ ಒಬ್ಬಳನ್ನು ನನಗೆ ಮರೆಯಲು ಸಾಧ್ಯವಾಗಲಿಲ್ಲ. ಅವಳು ನಮ್ಮ ಮಾವನ ಮಗಳು. ನನಗಿಂತ ಒಂದೆರಡು ವರ್ಷ ಚಿಕ್ಕ ಪ್ರಾಯದವಳಾಗಿರುತ್ತಾಳೆ. ಸುಂದರವಾದ ಮುಖ, ವಿಶಾಲವಾಗಿದ್ದು ರತ್ನದಂತೆ ಹೊಳೆಯುತ್ತಿರುವ ಕಣ್ಣುಗಳು, ವದನಮಂಡಲದಿಂದ ಹೊರಸೂಸುವ ಎಳೆ ನಗೆ, ಮುತ್ತಿನಂಥ ಮಾತುಗಳು ಇವುಗಳನ್ನು ಹೇಗೆ ಮರೆಯಲಿ?

ನನ್ನ ಬಾಲ್ಯದಲ್ಲಿ ನಾನು ವಿವಾಹಿತನಾಗುವುದಾದರೆ, ಇವಳನ್ನೇ ಮದುವೆಯಾಗುವೆನೆಂದು ಸಂಕಲ್ಪಿಸಿದ್ದೆನು. ಆ ಬಾಲ್ಯವು ಗತಿಸಲು, ನನ್ನಲ್ಲಿದ್ದ ಈ ಸಂಕಲ್ಪದ ಹುಚ್ಚು ಬಾಲ್ಯದೊಡನೆಯೇ ನನ್ನನ್ನು ತ್ಯಜಿಸಿ ಮಾಯವಾಯಿತು. ನನಗೆ

ಈಗ ಆ ಸ್ಮರಣೆಯುಂ ಬರುವಾಗ ನಗು ಬರುವದು ನನ್ನ ಮಡದಿಯೊಡನೆ ಈ ನನ್ನ ಬಾಲ್ಯದ ಸಂಕಲ್ಪವನ್ನು ಕುರಿತು ನುಡಿದರೆ, ಅವಳು ಬಿದ್ದು ಬಿದ್ದು ನಗಲು ಪ್ರಾರಂಭಿಸುವಳು.

ನಮ್ಮೆಲ್ಲರನ್ನೂ ಒಯ್ಯಲು ಒಂದು ಸ್ಪೆಶಲ್ ಬಸ್ಸೇ ಬೇಕಾಗಿ ಬಂದಿತು. ನಾನು ಸುಬ್ಬುವನ್ನು ಕರೆದುಕೊಂಡು ಮುಂದಿನ ಸೀಟಿನಲ್ಲಿ ಡ್ರೈವರನ ಪಕ್ಕದಲ್ಲಿಯೇ ಕುಳಿತುಕೊಂಡೆನು. ಫ್ರಂಟು ಸೀಟಿನಲ್ಲಿ ಪ್ರಯಾಣ ಮಾಡುವದು ದೊಡ್ಡ ಗೌರವ ವೆಂದು ವಿಚಾರಿಸುವವರಲ್ಲಿ ನಾನೂ ಒಬ್ಬನಾಗಿರುವೆನು. ಈಗಲಾದರೂ ಆ ಮನ ಸ್ಥಿತಿಯನ್ನು ನಾನು ತ್ಯಜಿಸಿರುವದಿಲ್ಲ. ಬಸ್ಸಿನಲ್ಲಿ ಪ್ರಯಾಣ ಮಾಡಬೇಕಾಗಿರುವ ಸಂದರ್ಭಗಳು ಒದಗಿದರೆ, ಫ್ರಂಟು ಸೀಟನ್ನು ಆಕ್ರಮಿಸುವುದರಲ್ಲಿ ನನ್ನ ಸಂಪೂರ್ಣ ಶ್ರದ್ಧೆಯನ್ನು ನಾನು ವಿನಿಯೋಗಿಸುತ್ತಲಿದ್ದೇನೆ. ನನಗೆ ಫ್ರಂಟು ಸೀಟು ಲಭಿಸದೇ ಹೋದರೆ, ಮನಸ್ಸಿನಲ್ಲಿ ಕುಂಠತೆಯುಂ ಉದಯಿಸುವುದು. ಹಲವು ಸಾರೆ ಫ್ರಂಟು ಸೀಟು ಸಿಗದ್ದರಿಂದ ಆ ಬಸ್ಸುಗಳಲ್ಲಿ ನನ್ನ ಪ್ರಯಾಣಗಳನ್ನು ನಿಲ್ಲಿಸಿದ ಸಂದರ್ಭ ಗಳೂ ಇರುತ್ತವೆ.

ಬಸ್ಸಿನಲ್ಲಿ ನಮ್ಮ "ಅತ್ತೆ"ಯ ಗಾರ್ದಭ ಸ್ವರವು ಶ್ರೀಕೃಷ್ಣನ ಪಾಂಚಜನ್ಯ ದಂತೆ ಸುಪ್ರಸಿದ್ಧವಾಗಿದ್ದು ಸರ್ವತ್ರ ಹಬ್ಬಿದ್ದಿತು. ಬೇರೆ ಯಾರು ಎಷ್ಟು ಕಿರುಚಿ ಕೊಂಡರೂ ಪ್ರಯೋಜನವಿಲ್ಲ; ಅವಳ ಕಂಠನಾದವು ಸಮುದ್ರತೀರದಲ್ಲಿ ತರಂಗ ಮಾಲೆಗಳ ಸಪ್ಪಳವಿದ್ದ ಹಾಗೆ ಒಂದು ನಿಮಿಷ ಸಮಯದ ವರೆಗಾದರೂ ಮೌನ ವನ್ನು ದೀಕ್ಷಿಸುವ ಸ್ವಭಾವವು ಅವಳಲ್ಲಿರುವುದಿಲ್ಲ. ಯಾವಾಗಲೂ ಮಾತುಗಳ ಸುರಿ ಮಳೆ! "ಮಾರ್ಗವನ್ನು ನೋಡಬೇಡ, ತಲೆ ತಿರುಗಿ ಬಿದ್ದೀಯೇ" ಎಂದು ಹಿಂದಿನ ಸೀಟಿನಲ್ಲಿ ಕುಳಿತಿದ್ದ ನಮ್ಮ ಮಾವನು ತನ್ನ ಎಳೆಯ ಮಗನಿಗೆ ಕೊಡುತ್ತಲಿದ್ದ ಶಾಸನ ಗರ್ಜನೆಯ ಕೋಲಾಹಲವು ಬೇರೊಂದು ಕಡೆ ಜಯಭೇರಿಯಂತೆ ಮೊಳ ಗುತ್ತಲಿರುವುದು; ಆದರೆ ನಾನು ಬೇರೊಂದು ಲೋಕದಿಂದ ಇಳಿದು ಬಂದವನ ಹಾಗೆ ಇವರ ಯಾವ ಸಂಭ್ರಮಗಳನ್ನೂ ಗಮನಿಸದೆ, ಅತ್ಯಂತ ಗೌರವಭಾವದಲ್ಲಿ ಫ್ರಂಟ ಸೀಟಿನಲ್ಲಿ ಕುಳಿತಿದ್ದೆನು.

ಊರುಗಳು, ಬೈಲುಗಳು, ವಿಪಿನಗಳು, ನದಿಗಳು ಎಂಬವುಗಳನ್ನು ಅತಿ ಕ್ರಮಿಸಿ ವಾಯುವೇಗದಲ್ಲಿ ನಾವು ಮುಂದೆ ಗಮಿಸುತ್ತಲಿದ್ದೆವು. ಅಲ್ಲಿ ಹರಡಿರುವ ಬೈಲುಗಳ ಸೌಂದರ್ಯವನ್ನೂ, ಕಾನನಗಳ ಏಕಾಂತತೆಯನ್ನೂ ಸವಿಯುತ್ತಾ ನಾನು ವಿಚಾರತಲ್ಲೀನನಾಗಿದ್ದೆನು. ಹಲವು ಸಾರೆ ನನ್ನ ಅತ್ತಿಗೆಯು ಯಾರು? ಹೇಗಿರುವಳು? ಎಂಬುದನ್ನು ನಾನು ಮನಸ್ಸಿನಲ್ಲಿ ಚಿಂತಿಸದೆ ಇರಲಿಲ್ಲ.

ಮಧ್ಯಾಹ್ನ ಎರಡು ತಾಸಿನ ವೇಳೆಯಲ್ಲಿ ನಾವು ನೆಂಟರ ಮನೆಗೆ ತಲುಪಿದೆವು. ಸತ್ಕಾರ, ಉಪಚಾರ ಇವುಗಳ ಗಲಭೆಯು ಆ ಮನೆಯಲ್ಲಿ ಸರ್ವತ್ರವ್ಯಾಪಿಸಿದ್ದಿತು. ಈ ಗುಲ್ಲುಗಳಿಲ್ಲದ, ಶಾಂತತೆಯ ವಾತಾವರಣದಲ್ಲಿ ವಿವಾಹಕಾರ್ಯಗಳನ್ನು ನಡೆಯಿಸಲು

ಮನುಷ್ಯನಿಗೆ ಸಾಧ್ಯವಿಲ್ಲವೆ? ಎಂದು ಕೆಲವು ಬಾರಿ ನಾನು ಚಿಂತಿಸುತ್ತಲಿದ್ದೇನೆ ಅದು ಏನೇ ಆಗಿರಲಿ, ಪ್ರಯಾಣದ ಆಯಾಸದಿಂದ ಬಳಲಿದ ನನಗೆ ವಿಶ್ರಾಮವು ಅತ್ಯಾವಶ್ಯಕವಾಗಿದ್ದಿತು. ಯಾವ ಗೋಜಿಗೂ ತೆರಳದೆ, ಒಂದು ಮೂಲೆಯಲ್ಲಿ ಕುಳಿತು ನನ್ನ ಭೋಜನವನ್ನು ಮುಗಿಸಿದೆನು. ಕೈಗೆ ಸಿಕ್ಕಿದ ಒಂದು ಚಾಪೆಯನ್ನು ಅಸ್ತರಿಸಿ, ಒಂದು ಮೂಲೆಯಲ್ಲಿ ಅದನ್ನು ಹಾಸಿ, ಮಲಗಿಕೊಂಡು ವಿಶ್ರಾಂತಿಯನ್ನು ಪಡೆದೆನು ಕಳೆದ ದಿನದ ರಾತ್ರಿಯು ಪ್ರಯಾಣಕ್ಕಿರುವ ಸನ್ನಾಹಗಳ ಗುಲ್ಲಾಗಿದ್ದುದರಿಂದ, ಆ ರಾತ್ರಿಯಲ್ಲಿ ನನಗೆ ಸರಿಯಾದ ನಿದ್ರೆಯು ಲಭಿಸಿರಲಿಲ್ಲ ಹೆಚ್ಚುಸಮಯವು ಗತಿಸುವುದರೊಳಗಾಗಿ ನಿದ್ರಾಂಗನೆಯ ಕೃಪಾಕಟಾಕ್ಷವೀಕ್ಷಣಕ್ಕೆ ನಾನು ಪಾತ್ರೀಭವಿಸಿದೆನು.

ಮದುವೆಯ ಮನೆಯಲ್ಲಿ ತಾಂಡವವಾಡುತ್ತಿರುವ ಸಂಭ್ರಮಗಳನ್ನೂ ಗಲಭೆಗಳನ್ನೂ ಇಲ್ಲಿ ವಿವರಿಸಲು ನಾನು ಆಗ್ರಹಿಸುವುದಿಲ್ಲ. ಆ ಕಾಹಿಲೆಗಳಿಗೆ ಓದುಗರು ಪಾತ್ರೀಭವಿಸಿ ಧಾರಾಳವಾಗಿ ಅನುಭವಿಸಿರಬಹುದು; ಆದರೆ ಇಲ್ಲಿ ನಮ್ಮಣ್ಣನ ಮದುವೆಯಲ್ಲಿ ನಡೆದ ಒಂದು ವಿನೋದ ಸಂಗತಿಯನ್ನು ನುಡಿದು ಬಿಡುವೆನು.

ಮದುವೆಯ ಔತನಕ್ಕೆ ಬೇಕಾದ ಭಕ್ಷ್ಯ ಭೋಜ್ಯಗಳನ್ನು ಒಂದು ದಿನ ರಾತ್ರಿ ಮುಂಚೆಯೇ ತಯಾರಿಸುವ ಅಭ್ಯಾಸವು ಎಲ್ಲಾ ಕಡೆಗಳಲ್ಲಿ ವಾಡಿಕೆಯಷ್ಟೆ. ನಮ್ಮಣ್ಣನ ಮದುವೆಯಲ್ಲಿಯಾದರೂ ಇದೇ ಕ್ರಮವನ್ನು ಅನುಸರಿಸಿದರು. ಆ ದಿನ ರಾತ್ರಿ ಅಡಿಗೆಯವರು ಔತನಕ್ಕೆ ಬೇಕಾದ ಲಾಡು-ಹೋಳಿಗೆ ಎಂಬಿತ್ಯಾದಿ ಮಧುರ ಫಲಾಹಾರಗಳನ್ನು ಮಾಡಲು ಪ್ರಾರಂಭಿಸಿದರು ಆ ಭಕ್ಷ್ಯಗಳ ಘಮಘಮ ವಾಸನೆಯು ಮೂಗಿನಲ್ಲಿ ಬಡಿಯುತ್ತಿರುವಾಗ ನನ್ನ ನಾಲಿಗೆಯಿಂದ ನೀರು ಹರಿಯಲು ಪ್ರಾರಂಭವಾಯಿತು ಅತ್ಯಂತ ಆಶೆಯಿಂದ ನಾವು ಹುಡುಗದಂಡಿನವರು ಪಾಕಶಾಲೆಯಲ್ಲಿ ಪ್ರವೇಶಿಸಿದೆವು

ಅಡಿಗೆಯವರಾದರೊ ಭಕ್ಷ್ಯಗಳನ್ನು ಮಾಡುತ್ತಿದ್ದಂತೆಯೇ ಯಾವ ಸಂಕೋಚವೂ ಇಲ್ಲದೆ ಕೆಲವನ್ನು ಬಾಯಿ ಎಂಬ ರೇವಿನ ಮೂಲಕ ಉದರನಗರಕ್ಕೆ ರಫ್ತು ಮಾಡುತ್ತಲಿದ್ದರು. ನಾನು ಅವರನ್ನು ಅತ್ಯಂತ ವಿನಯದಲ್ಲಿ 'ನಮಗೆ ನಾಲ್ಕು ಲಾಡುಗಳನ್ನು ಕೊಡಿ' ಎಂದು ಅಂಗಲಾಚಿ ಬೇಡಿಕೊಂಡೆನು

ಅವರು ಅತ್ಯಂತ ನಿರ್ದಯರು ತಾವು ಬೇಕಾದಷ್ಟು ಬಕಾಸುರನ ಹಾಗೆ ಮುಕ್ಕುತ್ತಲಿದ್ದರೂ ಬಾಲಕರಾದ ನಾವು ಯಾಚಿಸಲು ಒಂದು ಚೂರು ನಮಗೆ ಕೊಡಲು ಅವರಲ್ಲಿ ಕರುಣೆಯುದಯಿಸಲಿಲ್ಲ "ಸುಮ್ಮನೆ ಹೋಗು. ತಲೆ ಹರಟೆಗೆ ಬಂದಿರುವಿಯೇನ ?" ಎಂದು ಗರ್ಜಿಸಿ, ಆ ಬಕಾಸುರರು ಸಟ್ಟುಗಗಳನ್ನು ತೆಗೆದು ಪ್ರಹರಿಸುವೆವೆಂದು ಭಯಪಡಿಸಿದರು. ನಾನು ಈ ಮೊದಲೇ 'ನಾನು ಸ್ವಲ್ಪ ಮುಂಗೋಪಿಯೆ'ಂದು ಹೇಳಿದ್ದೇನೆ ಅಡಿಗೆಯವರ ವರ್ತನೆಯನ್ನು ಕಂಡು ನನಗೆ ಕೋಪವು ಬಂದಿತು. "ನೀವು ಕೊಡದಿದ್ದರೆ ಬೇಡ, ನಾನು ಶ್ರೀನಿವಾಸಮೂರ್ತಿ

ಎಂಬುದು ಜ್ಞಾಪಕದಲ್ಲಿರಲಿ. ನಿಮಗೆ ತಕ್ಕ ಪಾಠವನ್ನು ಕಲಿಸದೆ ಬಿಡುವ ಆಸಾಮಿ ನಾನಲ್ಲ” ಎಂಬ ವೀರವಾದದೊಡನೆ ನನ್ನ ದಂಡಿನೊಡನೆ ಪಾಕಶಾಲೆಯನ್ನು ಪರಿತ್ಯಜಿಸಿದೆನು

ನಾನು ಜಂಭದಿಂದ ನುಡಿದ ನುಡಿಗಳು ಅಪಾಗಿರಲಿಲ್ಲ; ಅಡಿಗೆಯವನಿಗೆ ಯಾವುದಾದರೂ ಒಂದು ಪ್ರತಿಕ್ರಿಯೆಯನ್ನು ಮಾಡಬೇಕೆಂದು ನಾನು ಮನಸ್ಸಿನಲ್ಲಿಯೇ ನಿರ್ಧರಿಸಿದೆನು. ನಾನು ಸುಬ್ಬುವನ್ನೂ ಇನ್ನು ಕೆಲವು ಗೆಳೆಯರನ್ನೂ ದೂರದಲ್ಲಿರುವ ಒಂದು ಮರದ ನೆರಳಿಗೆ ಕರೆದುಕೊಂಡು ಹೋದೆನು; ಅಲ್ಲಿ ನಮ್ಮ ಕ್ಯಾಬಿನೆಟ್ಟ ಮೀಟಿಂಗು ನಡೆದಿತು. ಯಾವ ರೀತಿಯಲ್ಲಿ ಅಡಿಗೆಯವನಿಗೆ ತಿರುಮಂತ್ರವನ್ನು ಕಲಿಸಬೇಕೆಂಬುದು ಒಂದು ಗಹನವಾದ ಸಮಸ್ಯೆಯಾಗಿ ಪರಿಣಮಿಸಿತು ಒಬ್ಬೊಬ್ಬರು ಒಂದೊಂದು ವಿಧವಾದ ಸಲಹೆಗಳನ್ನು ಮಂತ್ರಿಸಭೆಯ ಮುಂದೆ ತಂದರು; ಆದರೆ ಅವುಗಳನ್ನು ಓಟಿಗೆ ಹಾಕಲು ಅವುಗಳೆಲ್ಲವೂ ಬಿದ್ದು ಹೋದುವು.

ಅಂತ್ಯದಲ್ಲಿ ನಾನೊಂದು ಸೂಚನೆಯನ್ನು ತಂದೆನು; ಅಡಿಗೆಯವರು ಭಕ್ಷ್ಯಗಳನ್ನು ಮಾಡಿದ ನಂತರ, ಎಲ್ಲಿ ಭದ್ರಪಡಿಸುತ್ತಾರೆಂಬದನ್ನು ಹೊಂಚು ಹಾಕಬೇಕೆಂದೂ, ಎಲ್ಲರೂ ನಿದ್ರಿಸಿದ ನಂತರ ಘಜನೀಮಹಮ್ಮದನು ಸೋಮೇಶ್ವರವನ್ನು ಸುಲಿದಂತೆ ಲೂಟಿ ಮಾಡಬೇಕೆಂದೂ ಇರುವ ನನ್ನ ಸೂಚನೆಯನ್ನು ಕ್ಯಾಬಿನೆಟ್ಟಿನ ಮುಂದೆ ಇಟ್ಟೆನು. ಅವರು ಐಕ್ಯಮತದಿಂದ ನನ್ನ ಅಭಿಪ್ರಾಯವನ್ನು ಪಾಸು ಮಾಡಿದರು. ಭಕ್ಷ್ಯಗಳನ್ನು ಭದ್ರಪಡಿಸುವುದೆಲ್ಲಿ? ಎಂಬುದನ್ನು ತಿಳಿಯಲು ಒಬ್ಬ ಗೂಢಚಾರನನ್ನು ನಿಯಮಿಸಿದೆವು ಕ್ಯಾಬಿನೆಟ್ಟಿನ ಮುಂದಿನ ಕಾರ್ಯ ಪದ್ಧತಿಯನ್ನು ಸಮಯಕ್ಕೆ ತಕ್ಕಂತೆ ಜಾರೀ ಪಡಿಸಲಿರುವ ಅಧಿಕಾರವನ್ನು ಹುಡುಗರ ದಂಡಿನವರು ನನಗೆ ಕೊಟ್ಟರು ಒಂದು ಮಾತಿನಲ್ಲಿ ಹೇಳುದಾದರೆ, ಇಟೇಲಿಯಲ್ಲಿ ಮುಸ್ಸೋಲಿನಿಗೂ, ಜರ್ಮನಿಯಲ್ಲಿ ಹಿಟ್ಲರನಿಗೂ, ರಷ್ಯದಲ್ಲಿ ಸ್ಟಾಲಿನನಿಗೂ ಇರುವ ಪವರು (Power) ನಮ್ಮ ಹುಡುಗ ಲೋಕದಲ್ಲಿ ನನಗೂ ಲಭಿಸಿತು

ನಾವು ಮಲಗುವಾಗಲೂ ನಮ್ಮ ಗೇಲಗಿನವರು ಪ್ರತ್ಯೇಕವಾದ ಸ್ಥಳದಲ್ಲಿ ನಿದ್ರಿಸಲು ನಾನು ಆಜ್ಞಾಪಿಸಿದೆನು ಎಲ್ಲರೂ ನಾವು ಬೆನ್ನುಗಳನ್ನು ತಟ್ಟಿದೊಡನೆಯೇ ಎದ್ದು ಮುಂದಿನ ಕಾರ್ಯ ಪದ್ಧತಿಯನ್ನು ನೆರವೇರಿಸಲು ಸನ್ನದ್ಧರಾಗಬೇಕೆಂದೂ ಈ ಕಾರ್ಯವನ್ನು ಬಹಿರಂಗಪಡಿಸಕೂಡದೆಂದೂ ನಾನು ಎಚ್ಚರಿಕೆಯನ್ನು ನೀಡಿದೆನು. ನಮ್ಮ ದಳದವರು ಕಳೆದ ಲೋಕಮಹಾಸಂಗ್ರಾಮದಲ್ಲಿ ಕಾದಿದ ಬ್ರಿಟಿಷ್ ಸೈನ್ಯಕ್ಕಿಂತಲೂ ಮಿಗಿಲಾದ ಶಿಸ್ತಿನಲ್ಲಿ ನನ್ನ ಆಜ್ಞೆಗಳನ್ನು ಪಾಲಿಸಿದರೆಂದು ಅವರನ್ನು ಎಷ್ಟು ಹೊಗಳಿದರೂ ಸಾಲದು. ನನ್ನ ಗುಂಪಿನವರನ್ನು ಶಿಸ್ತಿನಿಂದ ಮುಂದಕ್ಕೆ ಒಯ್ಯಲು ನನಗೆ ಸಾಮರ್ಥ್ಯವಿದೆ ಎಂದರೆ ಅದು ಹೆಮ್ಮೆಯ ಮಾತಾಗಲಾರದು.

ರಾತ್ರಿ ೧೨ ತಾಸಿಗೆ ನಮ್ಮ ಗೂಢ ಚಾರನಿಂದ ನಮಗೆ ಅವಶ್ಯವಿರುವ ವಿವರ

ಗಳು ಸಿಕ್ಕಿದುವು. ಅಡಿಗೆಯವರು ಭಕ್ಷ್ಯಗಳನ್ನು ಭದ್ರಪಡಿಸಿದ ಕೋಣೆಯನ್ನು ತಿಳಿದುದಾಯಿತು. ಪ್ರಥಮಾನ್ವೇಷಣವು ಅವಶ್ಯವೆಂದು ಬಗೆದು ನಾನೇ ಅಲ್ಲಿಗೆ ತೆರಳಿ ಪರಿಶೋಧಿಸಿದೆನು. ಬಾಗಿಲಿಗೆ ಭದ್ರವಾಗಿ ಬೀಗ ಹಾಕಿದ್ದುದರಿಂದ ನಾನು ಹತಾಶನಾಗಬೇಕಾಗಿ ಬಂದಿತು. ಇಷ್ಟು ಚೆನ್ನಾಗಿ ಬೇಕಾದ ಏರ್ಪಾಡುಗಳನ್ನು ಮಾಡಿರುವಾಗ ಬೇಟೆಯು ಸಿಗದೆ ಹೋದರೆ, ಮನಸ್ಸೆಷ್ಟು ವಿಷಾದಭರಿತವಾಗುವುದೆಂಬುದನ್ನು ವಾಚಕರೇ ಊಹಿಸಿಕೊಳ್ಳಲಿ! ನಾನು ನನ್ನ ಬುದ್ಧಿಯನ್ನು ಪ್ರಯೋಗಿಸಿ ಕಾರ್ಯವನ್ನು ಸಾಧಿಸಬೇಕೆಂದು ಸಂಕಲ್ಪಿಸಿದೆನು. ಸಾಧಾರಣವಾಗಿ ಈ ಜಾತಿಯ ಬೀಗಗಳಿಗೆ ಅದೇ ಮಾದರಿಯ ಇತರ ಬೀಗಗಳ ಕೀಲುಗಳು ಆಗುತ್ತವೆ. ನಾನು ನಮ್ಮ ಮಾವನ ಹಿರಿಯ ಮಗನ ಬೀಗದ ಕೈಗೊಂಚಲುಗಳಲ್ಲಿ ಇದೇ ತರದ ಒಂದು ಬೀಗದ ಕೈಯನ್ನು ನೋಡಿದ್ದೆನು. ಅದು ಈ ಬೀಗಕ್ಕೆ ಆಗಲಾರದೆ?

ಆದರೆ ಬೀಗದ ಕೈಯನ್ನು ದೊರಕಿಸುವ ಬಗೆ ಹೇಗೆ? ಅವನೊಡನೆ ಕೇಳಿದರೆ ಕೊಡಲಾರನು ಕಾರ್ಯವು ಹೊರಬಿದ್ದರೆ ಫಜೀತಿಗೆ ಮೇರೆಯಿಲ್ಲ. ಆದುದರಿಂದ ಅವನಿಗೆ ತಿಳಿಯದಂತೆ ಅವನು ನಿದ್ರಿಸುತ್ತಿರುವ ವೇಳೆಯಲ್ಲಿ ಅದನ್ನು ರೋಕರ್ ಹಾಕಬೇಕೆಂದು ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡೆನು

ಬೆಕ್ಕು ಚಲಿಸುವಾಗ ಒಂದು ವೇಳೆ ಅದರ ಪಾದಗಳ ಸಪ್ಪಳವು ಕೇಳಬಹುದು; ಆದರೆ ನಾನು ಹೆಜ್ಜೆಗಳನ್ನು ಇಡುವಾಗ ಆ ರವವು ಹೊರಸೂಸದು. ಅಷ್ಟು ಜಾಗ್ರತೆಯಾಗಿ ಹೆಜ್ಜೆಗಳ ಮೇಲೆ ಹೆಜ್ಜೆಗಳನ್ನಿಡುತ್ತ ನಾನು ವೆಂಕಟನು ಮಲಗಿದಲ್ಲಿಗೆ ತೆರಳಿದೆನು ಅವನು ನಡುಮನೆಯಲ್ಲಿ ಮಲಗಿದ್ದನು ಒಂದು ಹಣತೆಯು ಉರಿಯುತ್ತಲಿದ್ದಿತು. ಅದು ನನ್ನ ಉದ್ಯಮಕ್ಕೆ ಅತ್ಯಂತ ಸಹಾಯವನ್ನು ನೀಡಿತು. ಆ ಬೆಳಕು ಅಲ್ಲಿ ಇಲ್ಲದಿದ್ದರೆ ವೆಂಕಟನು ಮಲಗಿರುವುದೆಲ್ಲಿ? ಎಂದು ಆ ಇರುಳಿನಲ್ಲಿ ತಿಳಿದುಕೊಳ್ಳಲು ನನಗೆ ಎಂದಿಗೂ ಸಾಧ್ಯವಾಗುತ್ತಿರಲಿಲ್ಲ ಅಡ್ಡಾದಿಡ್ಡಿಯಾಗಿ ಜನರು ನಡುಮನೆಯಲ್ಲಿ ಮಲಗಿದ್ದುದರಿಂದ ದೀಪವಿಲ್ಲದೆ ಹೋಗಿದ್ದರೆ, ಒಂದು ವೇಳೆ ನಾನು ಕತ್ತಲೆಯಲ್ಲಿ ಜನರನ್ನು ತುಳಿದುಬಿಡುತ್ತಿದ್ದೆನು. ಆಗ ನಿಮಿಷಾರ್ಧದಲ್ಲಿಯೇ ಒಂದು ಗಲಭೆಯು ಸಮುದ್ಭವವಾಗಿ ನನ್ನ ಪ್ರಯತ್ನವು ಆಕಾಶ ಕುಸುಮವಾಗಿ ಪರಿಣಮಿಸುವುದರಲ್ಲಿ ಯಾವ ಸಂದೇಹವೂ ಇರಲಿಲ್ಲ.

ವೆಂಕಟನು ಕತ್ತಿಯ ಹಾಗೆ ಗೊರಕೆ ಹೊಡೆಯುತಲಿದ್ದನು. ಆಗಲಿನ ಅವನ ಅವಸ್ಥೆಯನ್ನು ನೋಡಲು ಅವನು ಅಭಿನವ ಕುಂಭಕರ್ಣನೆಂಬುದಾಗಿ ಊಹಿಸಬೇಕಾಗಿ ಬರುತ್ತಲಿದ್ದಿತು. ಈ ಪರಿಸ್ಥಿತಿಯು ನನ್ನ ಪ್ರಯತ್ನಕ್ಕೆ ಅತ್ಯಂತ ಸಹಕಾರಿಯಾಯಿತೆಂದು ಹೇಳಬೇಕಾದುದಿಲ್ಲ. ನಾನು ಮೆಲ್ಲನೆ ಅವನ ಅಂಗಿಯ ಜೇಬಿನಲ್ಲಿ ಕೈಹಾಕಿದೆನು; ಬೀಗದ ಕೈ ನನ್ನ ಕರಗತವಾಯಿತು. ನಾನು ಅದನ್ನು ತೆಗೆದುಕೊಂಡು ಅತ್ಯಂತ ಜಾಗರೂಕತೆಯಿಂದ ಅಲ್ಲಿಂದ ಹಿಂದಿರುಗಿದೆನು.

ನಾನು ಭಕ್ಷ್ಯ ಸಾಮಗ್ರಿಗಳನ್ನು ಭದ್ರಪಡಿಸಿರುವ ಕೋಣೆಯ ಬಳಿಗೆ ತೆರಳಿ

ದೆನು ಆ ಬೀಗದ ಕೈಯಿಂದ ಕೋಣೆಯ ಬಾಗಿಲುಗಳನ್ನು ತೆರೆಯಲು ಸಾಧ್ಯ ವಿದೆಯೋ? ಎಂದು ಪರೀಕ್ಷಿಸಲಾಗಿದ್ದಿತು. ಅಲ್ಲಿಗೆ ನಾನು ಈ ಸಾರೆ ತೆರಳಿದ್ದರಿಂದ ನನ್ನ ಪ್ರಯತ್ನವು ಸಫಲವಾಯಿತು. ವೆಂಕಟನ ಬೀಗದ ಕೈಯನ್ನು ಉಪಯೋಗಿಸಿ ನಾನು ಕದಗಳನ್ನು ತೆರೆದೆನು. ಒಳಗೆ ಇರುಳಿನ ಗವಿಯಾಗಿದ್ದಿತು. ಆದುದರಿಂದ ಭಕ್ಷ ಸಾಮಗ್ರಿಗಳು ಯಾವ ಮೂಲೆಯಲ್ಲಿವೆ? ಎಂಬುದನ್ನು ತಿಳಿದುಕೊಳ್ಳಲು ನನ್ನ ನೇತ್ರಗಳು ಶಕ್ತಿಯುಳ್ಳವುಗಳಾಗಲಿಲ್ಲ. ಒಂದುವೇಳೆ ನಾವು ಒಳಗೆ ಹೋಗಿ ಸಾಮಾನುಗಳು ಯಾವ ಮೂಲೆಯಲ್ಲಿವೆ? ಎಂಬುದನ್ನು ತಿಳಿಯದೆ ಅವುಗಳ ಮೇಲೆ ಬಿದ್ದು ಸಪ್ಪಳವಾದರೆ, ಕಾರ್ಯವು ಕೆಟ್ಟು ಹೋಗುವದೆಂಬುದನ್ನು ನಾನು ಅರಿತಿ ದ್ದೆನು. ನಮಗೆ ಒಂದು ಬೆಳಕಿನ ಸಹಾಯವು ಅತ್ಯಾವಶ್ಯಕವಾಗಿದ್ದಿತು.

ನಮ್ಮ ಮಾವನಿಗೆ ಬೀಡಿ ಸೇದುವ ಅಭ್ಯಾಸವಿದ್ದಿತು. ಆದುದರಿಂದ ಅವನ ಹತ್ತಿರ ಬೆಂಕಿ ಪೆಟ್ಟಿಗೆಯು ಇದ್ದೇ ಇರಬೇಕೆಂದು ನಾನು ಮನಸ್ಸಿನಲ್ಲಿಯೇ ನಿರ್ಧ ರಿಸಿಕೊಂಡೆನು ಅವನು ಮಲಗಿರುವಲ್ಲಿಗೆ ತೆರಳಿ, ನಾನು ಅವನ ಜೇಬಿನಿಂದ ಬೆಂಕಿ ಪೆಟ್ಟಿಗೆಯನ್ನು ಜಾರಿಸಿದೆನು. ಎಲ್ಲ ಸಲಕರಣೆಗಳೂ ಒದಗಿದ ನಂತರ ನಾನು ನನ್ನ ದಂಡಿನವರಿಗೆ ನನ್ನ ಸೂಚನೆಯನ್ನು ಕೊಟ್ಟೆನು. ಅವರು ಯಾರೂ ನಿದ್ರಿಸಿರಲಿಲ್ಲ. ನಾನು ಹೋಗಿ ಬೆನ್ನು ತಟ್ಟಿದೊಡನೆಯೇ ಅವರು ತಮ್ಮ ಹಾಸಿಗೆಯಿಂದ ಎದ್ದು ಒಬ್ಬೊಬ್ಬರಾಗಿ ನನ್ನನ್ನು ಹಿಂಬಾಲಿಸಿದರು. ಅವರು ಎದ್ದು ಬರುವಾಗ ಸ್ವಲ್ಪವೂ ಶಬ್ದವನ್ನುಂಟು ಮಾಡದಂತೆ ಜಾಗರೂಕರಾಗಿದ್ದರು

ನಾನು ಅವರ ದಳಪತಿಯೆಂದು ನಟಿಸುತ್ತ ತಲೆ ಎತ್ತಿ ಮುಂದೆ ನಡೆದೆನು. ಬಾಗಿಲು ತೆರೆಯುವ ಕೆಲಸವು ಒಂದು ನಿಮಿಷದಲ್ಲಿ ಕಳೆಯಿತು. ನಾನು ಬೆಂಕಿ ಪೆಟ್ಟಿಗೆಯಿಂದ ಒಂದು ಕಡ್ಡಿಯನ್ನು ತೆಗೆದು ಹತ್ತಿಸಿದೆನು. ಹತ್ತೆಂಟು ಬುಟ್ಟಿಗಳಲ್ಲಿ ತುಂಬಿರುವ ಭಕ್ಷ ಸಾಧನಗಳು ನನ್ನ ದೃಷ್ಟಿಯಲ್ಲಿ ಪಾತ್ರೀಭವಿಸಿದುವು. ನಾನು ಅವುಗಳ ಪೈಕಿ ಒಂದನ್ನು ಎತ್ತಿ ನನ್ನ ಹಿಂಬಾಲಕರ ಕರಗಳಲ್ಲಿ ನೀಡಿದುದಲ್ಲದೆ, ಅವರು ತಿಂಡಿಯೊಡನೆ ಹತ್ತಿರದ ಕೆರೆಯ ದಂಡೆಗೆ ತೆರಳಬೇಕೆಂದು ಆಜ್ಞಾಪಿಸಿದೆನು. ಈ ಆಜ್ಞೆಯು ಹೊರಬೀಳುವುದೇ ತಡ, ಅವರು ತಿಂಡಿಗಳೊಡನೆ ಕೊಳದ ದಂಡೆ ಯನ್ನು ಸೇರಿದರು.

ಮೊದಲಿನಂತೆಯೇ ಬಾಗಿಲುಗಳನ್ನು ಮುಚ್ಚಿ ಬೀಗವನ್ನು ಭದ್ರಪಡಿಸಿದ ನಂತರ ನಾನು ಹೊರಬಿದ್ದೆನು. ನಮ್ಮ ಈ ಕೃತ್ಯವನ್ನು ಬೇರೆ ಯಾರಾದರೂ ನೋಡುತ್ತಿರುವರೇ ಎಂಬ ದಿಗಿಲು ನನ್ನಲ್ಲ ಅತ್ಯಧಿಕವಾಗಿದ್ದಿತು; ಆದರೆ ದೇವರ ದಯದಿಂದ ಯಾರೂ ಕಾಣಲಿಲ್ಲ. ಬೆಂಕಿಪೆಟ್ಟಿಗೆಯನ್ನು ಮಾವನ ಜೇಬಿನಲ್ಲಿಯೂ ಬೀಗದ ಕೈಯನ್ನು ವೆಂಕಟನ ಜೇಬಿನಲ್ಲಿಯೂ ಇಟ್ಟು ನಾನು ಐದು ನಿಮಿಷಗಳೊಳ ಗಾಗಿ ಕೆರೆಯ ದಂಡೆಯಲ್ಲಿ ನನ್ನನ್ನು ಕಾದು ನಿಂತಿರುವ ಗೆಳೆಯರನ್ನು ಸೇರಿದೆನು.

ನಾವು ಹೊಟ್ಟೆ ಹಿಡಿಯುವಷ್ಟು ತಿಂಡಿಗಳನ್ನು ತಿಂದೆವು; ಆದರೆ ಒಂದು

ಕುಕ್ಕೆ ತುಂಬ ನಾವು ಆರೇಳು ಮಂದಿ ಹುಡುಗರು ಹೇಗೆ ತಾನೇ ತಿಂದು ತೀರಿಸಲು ಸಾಧ್ಯವಿದೆ? ಬಕಾಸುರನೋ ಭೀಮಸೇನನೋ ನಾವಾಗಿದ್ದರೆ ಒಂದು ಕುಕ್ಕೆಯನ್ನೇಕೆ, ಅಲ್ಲಿ ಮಾಡಿದ್ದ ಹತ್ತೆಂಟು ಬುಟ್ಟಿಭಕ್ಷ್ಯದ್ರವ್ಯಗಳನ್ನು ತಿಂದು ತೇಗಬಲ್ಲವಾಗಿದ್ದೆವು; ಆದರೆ ನಾವು ನಮ್ಮ ದುರ್ದೈವವಶಾತ್ ಭೀಮಸೇನರೋ ಬಕಾಸುರರೋ ಆಗಿರಲಿಲ್ಲ. ಮೂರುಗೇಣು ಉದ್ದವಿರುವ ಬರಿಯ ಬಾಲಕರಾಗಿದ್ದೆವು ಆ ಸಂದರ್ಭದಲ್ಲಿ ಸುಬ್ಬುವೂ ನಾನೂ ಬಕಾಸುರನ ಅವತಾರಗಳಾಗದಿರುವದಕ್ಕೆ ಹೇಗೆ ಖೇದಿಸಿದೆವೆಂಬುದು ಈಗಲೂ ನನ್ನ ನೆನಪಿನಲ್ಲಿದೆ ನಾವು ಒಬ್ಬರೊಬ್ಬರೂ ಎರಡು-ಮೂರು ಲಾಡು ಗಳನ್ನೂ, ಒಂದೆರಡು ಹೋಳಿಗೆಗಳನ್ನೂ ಮಾತ್ರ ಭಕ್ಷಿಸಿರಬಹುದು ಬುಟ್ಟಿಯಲ್ಲಿ ಇನ್ನೂ ಅರ್ಧಕ್ಕಿಂತಲೂ ಮಿಕ್ಕಿ ಭಕ್ಷ್ಯಸಾಧನಗಳಿದ್ದವು. ಏನು ಮಾಡುವುದು? ಪುನಃ ಬಾಕಿಯಾದುದನ್ನು ಉಗ್ರಾಣಕ್ಕೆ ಒಯ್ದು ಇರಿಸುವುದೇ? ಆದರೆ ಆ ಕೃತ್ಯ ವನ್ನು ನೆರವೇರಿಸಲು, ಇಷ್ಟೆಲ್ಲಾ ಸಾಹಸಗಳನ್ನು ಗೈದ ನನಗೂ ಧೈರ್ಯಬರಲಿಲ್ಲ.

ಒಂದು ದೊಡ್ಡ ಕಲ್ಲನ್ನೆತ್ತಿ ಬುಟ್ಟಿಯ ಮಧ್ಯದಲ್ಲಿಟ್ಟು, ಬುಟ್ಟಿಯನ್ನು ಕೆರೆ ಯಲ್ಲಿ ಬಿಟ್ಟೆವು ಹೆಚ್ಚು ಮಂದಿ ಪ್ರಯಾಣಿಕರನ್ನು ವಹಿಸಿಕೊಂಡು ತೆರಳುತ್ತಿರುವ ಡೋಣಿಯು ಬಿರುಗಾಳಿಗೆ ಸಿಲುಕಿ ಮುಳುಗಿ ಹೋಗುವಂತೆ, ಆ ಬುಟ್ಟಿಯು ನೀರು ಪಾಲಾಯಿತು. ನಾವು ಕಾರ್ಯಸಾಧನೆಯನ್ನು ಮಾಡಿದ ಕೃತಾರ್ಥತೆಯೊಡನೆ ನಮ್ಮ ಹಾಸಿಗೆಗಳಲ್ಲಿ ಮಲಗಿಕೊಂಡೆವು ನಮ್ಮ ಎದೆಗಳಲ್ಲಿ ಆಗ ಉಕ್ಕಿ ಹರಿಯುತ್ತ ಲಿದ್ದ ಸಂತೋಷವು ಆರ್ಕಾಟು ಕೋಟೆಯನ್ನು ಹಿಡಿದಾಗ ರಾಬರ್ಟ ಕ್ಲೈವನಿಗೂ ಲಭಿಸಿರಲಾರದು. ನಾವು ನಿಶ್ಚಿಂತರಾಗಿ ಆ ರಾತ್ರಿ ನಿದ್ರಿಸಿದೆವು. ಮರುದಿನ ಮುಂಜಾನೆ ನಮಗೆ ಬರಲಿರುವ ವಿಪತ್ತನ್ನು ಕುರಿತು ನಾವು ಸ್ವಪ್ನೇಪಿ ವಿಚಾರಿಸಿರ ಲಿಲ್ಲ.

ಮರುದಿನ ನಾವು ಹಾಸಿಗೆಯನ್ನು ಬಿಟ್ಟು ಏಳುವಾಗ ಉಗ್ರಾಣದಲ್ಲಿ ಭಕ್ಷ್ಯ ಸಾಧನಗಳ ಒಂದು ಬುಟ್ಟಿಯು ಅಪಹೃತವಾದ ವಾರ್ತೆಯು ಮದುವೆಯ ಮನೆಯ ಲ್ಲೆಲ್ಲಾ ವ್ಯಾಪಿಸಿದ್ದಿತು. ಬೀಗವು ಮೊದಲಿನಂತೆಯೇ ಭದ್ರವಾಗಿದೆ, ಯಾವ ಕೇಡೂ ಅದಕ್ಕೆ ಲಭಿಸಿಲ್ಲ; ಆದರೆ ಒಂದು ಫಲಹಾರಗಳ ಬುಟ್ಟಿಯು ಮಾತ್ರ ಮಾಯವಾಗಿ ಹೋಗಿದೆ! ಹೇಗೆಂಬುದನ್ನು ಬಲ್ಲವರಾರು?

ಅಡಿಗೆಯವರು ಇದಕ್ಕೆಲ್ಲಾ ಕಾರಣಭೂತನು ನಾನೆಂಬುದಾಗಿ ನನ್ನ ಕಡೆಗೆ ತಮ್ಮ ಬೆರಳುಗಳನ್ನು ತೋರಿಸದೆ ಇರಲಿಲ್ಲ. ಅವರು "ಈ ಪೋಲಿಯೇ ನಮಗೆ ಒಂದು ಪಾಠವನ್ನು ಕಲಿಸಿ ಕೊಡುವೆನೆಂದು ನಿನ್ನೆ ರಾತ್ರಿ ನುಡಿದನು" ಎಂದು ನುಡಿ ದರು. ನಮ್ಮ ಅಣ್ಣನಾದರೋ ಈ ಕಳ್ಳತನವನ್ನು ನಡೆಯಿಸುವ ಎದೆಗಾರಿಕೆಯು ನನಗೂ ಸುಬ್ಬುವಿಗೂ ಅಲ್ಲದೆ, ಬೇರೆ ಯಾರಿಗೂ ಇಲ್ಲವೆಂಬುದನ್ನು ಚೆನ್ನಾಗಿ ಅರಿ ತಿದ್ದನು. ನನ್ನ ಈ ತುಂಟತನಕ್ಕಾಗಿ ಅಣ್ಣನು ಆರು ಪ್ರಹಾರಗಳನ್ನು ನನಗೆ ಸನ್ಮಾನಿ ಸಿದನು. ಅಣ್ಣನು ಹೊಡೆದುದರಲ್ಲಿ ನನಗೆ ವ್ಯಸನವಿರಲಿಲ್ಲ; ಆದರೆ ಅಷ್ಟು ಜನರ

ಮುಂದೆ ಹೊಡೆದನಲ್ಲಾ! ಎಂಬುದೇ ನನಗಿರುವ ಚಿಂತೆಯು!

ನನಗೆ ಪ್ರಹಾರಗಳು ಲಭಿಸಿದ್ದನ್ನು ಅವಲೋಕಿಸಿ "ಏನೋ, ಹುಡುಗ! ತಿಂಡಿಯ ಚಪಲತೆಯಿಂದ ಹಾಗೆ ಮಾಡಿದ. ಅದಕ್ಕಾಗಿ ಹೊಡೆಯುವುದೇ? ಅಯ್ಯೋ ಪಾಪ!" ಎಂದು ಹೆಂಗಸರ ಗುಂಪಿನಲ್ಲಿ ೧೪-೧೫ ವರ್ಷ ಪ್ರಾಯದ ಹುಡುಗಿಯೊಬ್ಬಳು ನುಡಿಯುತ್ತಿರುವುದನ್ನು ನಾನು ಕೇಳಿದೆನು ಅನಂತರ ಅವಳು ಯಾರೆಂಬುದು ನನಗೆ ತಿಳಿಯಿತು. ಅವಳು ನನ್ನ ಅತ್ತಿಗೆಯಾಗಿದ್ದಳು. ಅವಳ ಈ ಸಹತಾಪ ಪ್ರದರ್ಶನವು ಅವಳನ್ನು ಕುರಿತು ನನ್ನ ಎದೆಯಲ್ಲಿ ಒಂದು ವಿಧದ ಗೌರವ ಭಾವವು ಸಂಜಾತವಾಗುವಂತೆ ಮಾಡಿತು.

ಮದುವೆಯು ವಿಜೃಂಭಣೆಯಿಂದ ನಡೆಯಿತು. ಹೋಳಿಗೆ-ಪಾಯಸದ ಗುಲ್ಲು ಅಲ್ಲದೆ ಬೇರೆ ಯಾವುದೂ ಅಲ್ಲಿರಲಿಲ್ಲ. ಈ ಸಂಗತಿಯನ್ನು ಹೆಚ್ಚಿಗೆ ವಿವರಿಸಿ, ವಾಚಕರ ಮನಸ್ಸುಗಳಲ್ಲಿ ಬೇಸರಿಕೆಯನ್ನುಂಟು ಮಾಡಲು ನಾನು ಪ್ರಯತ್ನಿಸುವದಿಲ್ಲ.

[೫]

ನಮ್ಮಣ್ಣನ ವಿವಾಹಮಹೋತ್ಸವವು ಜರುಗಿ ಎರಡು ವರ್ಷಗಳ ಕಾಲವು ಗತಿಸಿದುವು. ನಾನು I ಫಾರಂನಲ್ಲಿ ಪಠಿಸುತ್ತಲಿದ್ದೇನೆ. ನಮ್ಮ ಜೀವನವು ಮೊದಲಿನಂತೆಯೇ ಒಂದು ಯಂತ್ರದಂತೆ ನಿರುತ್ಸಾಹಭರಿತವಾಗಿ ಮುಂದೆ ಸಾಗುತ್ತಲಿರುವುದು ನವೋನ್ಮೇಷವಾಗಲೀ, ಚಟವಟಿಕೆಗಳಾಗಲೀ ನಮ್ಮ ಮನೆಯಲ್ಲಿ ನಲಿಯುತ್ತಿರಲಿಲ್ಲ ಎಲ್ಲವೂ ಮೊದಲಿನ ಹಾಗೆಯೇ, ಅಣ್ಣನ ವಿಷಾದಾತ್ಮಕ ಭಾವವು ಸ್ವಲ್ಪ ಮಟ್ಟಿಗೆ ಬದಲಾಯಿಸಿರುವುದು. ಇದೇ ಒಂದು ವ್ಯತ್ಯಾಸವಷ್ಟೇ. ನಾನು ಸುಬ್ಬುವಿನೊಡನೆ ಚಿಲ್ಲರೆ ಸಾಹಸ ಕಾರ್ಯಗಳನ್ನು ನಡೆಯಿಸುತ್ತಿದ್ದೆನೆಂದರೆ ಇಲ್ಲಿ ಸಾಕಾಗಬಹುದು, ಆದರೆ ಅವು ಯಾವವೂ ಪ್ರಸ್ತಾಪ ಯೋಗ್ಯವಾದವುಗಳಾಗಿರಲಿಲ್ಲ.

ಶೋಭನ ಪ್ರಸ್ತವು ಕಳೆಯಿತು. ಸ್ವಲ್ಪ ದಿನಗಳಲ್ಲಿಯೇ ನನ್ನ ಅಣ್ಣನ ಮಡದಿಯು, ನನ್ನ ಅತ್ತಿಗೆಯು, ನಮ್ಮ ಮನೆಯಲ್ಲಿ ಪಾದಾರ್ಪಣವನ್ನು ಮಾಡಿದಳು. ಅವಳು ನಮ್ಮ ಗೃಹವನ್ನು ಪ್ರವೇಶಿಸಿದ ಆ ದಿನವನ್ನು ನಾನೆಂದಿಗೂ ಮರೆಯಲಾರೆನು. ಅವಳ ತಾಯಿ ಮತ್ತು ಅವಳ ತಮ್ಮಂದಿರಿಬ್ಬರು ಅವಳೊಡನೆ ಬಂದಿದ್ದರು. ನಾನು ಸ್ವಲ್ಪ ಅಹಂಕಾರಿಯಾಗಿದ್ದೆನೆಂಬುದನ್ನು ಕಳೆದ ಪುಟಗಳನ್ನು ವಾಚಿಸಿದ ಓದುಗರು ಊಹಿಸಿಕೊಂಡಿರಬಹುದು. ನಾನು ಅವರನ್ನೇನೂ ಅಷ್ಟು ಲಕ್ಷಿಸಲಿಲ್ಲ.

ಆದರೆ ನನ್ನ ಅತ್ತಿಗೆಯ ರೂಪು, ಸ್ವಭಾವ, ಮಾತುಗಳು ಇವುಗಳು ನನ್ನಲ್ಲಿ ಒಂದು ವಿಚಿತ್ರವಾದ ವಿಕಾರವು ಉದಯಿಸುವಂತೆ ಮಾಡಿದುವು. ಅವಳ ನುಡಿಗಳು ನನಗೆ ಒಗ್ಗಿದುವೆಂದೇ ಹೇಳಬಹುದು ನಿಷ್ಕಲಂಕವಾದ ಆ ನೇತ್ರಗಳಿಂದ ಹೊರಸೂಸುವ ಆ ನೋಟವು ನನ್ನ ಎದೆಯಲ್ಲಿ ಮಾಸಿ ಹೋಗದ ಒಂದು ಚಿತ್ರವಾಗಿ ನಿಂತಿತು.

ನನ್ನ ಅತ್ತಿಗೆಯ ಸಹೋದರನು ನನ್ನನ್ನು ತೋರಿಸುತ್ತಾ ಅವನ ಜನನಿ

ಯೊಂದಿಗೆ "ಮದುವೆಯ ಕಾಲದಲ್ಲಿ ಹೋಳಿಗೆ-ಲಡ್ಡುಗಳನ್ನು ಎತ್ತಿ ಹಾಕಿದ ಕಳ್ಳನು ಇವನೇ" ಎಂದು ನುಡಿಯದೆ ಇರಲಿಲ್ಲ. ನನಗೆ ಬಹಳ ಕೋಪವು ಬಂದಿತು. ಎರಡು ವರ್ಷಗಳ ಹಿಂದೆ ಸಂಭವಿಸಿದ ಒಂದು ಕಾರ್ಯವನ್ನು ಪುನಃ ಎತ್ತಿ ನುಡಿಯುವುದನ್ನು ಯಾರು ತಾನೇ ಸಹಿಸುವರು? ನಾನಂತೂ ಜರ್ಮನಿಯ ಹಿಟ್ಲರನ ಹಾಗೆ ರೇಗಿದೆನು. "ಅದಕ್ಕಿಂತಲೂ ಹೆಚ್ಚಾದ ಪರಾಕ್ರಮವನ್ನು ನಾನು ತೋರಿಸಬಲ್ಲೆನು" ಎಂದು ನಾನು ಭಾವವನ್ನು ಮೂದಲಿಸದೆ ಇರಲಿಲ್ಲ

ಅವನ ತಾಯಿಯಾದರೂ ಒಳ್ಳೆಯ ಹೆಂಗಸೆಂದು ತೋರುತ್ತದೆ. ನನ್ನ ಈಗಲಿನ ಭಾವನೆಯೂ ಅದೇ ಆಗಿರುವುದು ಅವಳು ನನ್ನನ್ನು ನೋಡುತ್ತಾ "ಶೀನೂ, ನೀನು ಒಳ್ಳೆಯ ಹುಡುಗನಾಗಿರಬೇಕಪ್ಪಾ! ತುಂಟತನವನ್ನು ಮಾಡಬಾರದು." ಎಂದು ಉಪದೇಶಗಳನ್ನು ನೀಡಿದಳು. ನಾನು ಅವಳ ಆ ವಿನಯದ ಮಾತುಗಳ ಸಕ್ಕರೆಯ ಮಧ್ಯದಲ್ಲಿ ಕಹಿಯಾದ ಕೊಯಿನಾದ ಗುಳಿಗೆಯು ಅಡಗಿಕೊಂಡಿದೆ, ಎಂಬುದನ್ನು ಬಲ್ಲೆನು. ಎಲ್ಲರ ಕಣ್ಣುಗಳಲ್ಲಿಯೂ ಪೋಕರಿಯಾಗಿ ಬೀಳುವಷ್ಟು ಮಹದಪರಾಧವನ್ನು ನಾನು ಏನು ಮಾಡಿರುವೆನು? ಎಂಬುದು ನನಗೆ ಹೊಳೆಯದು.

ಆ ದಿನವೇ ನನ್ನ ಅಣ್ಣನು ನನ್ನ ಮೇಲೆ ಗಳಗನೇ ಸೆಕ್ಷನ್ನನ್ನು ಜಾರೀ ಮಾಡಿದನು. ನೆಂಟರೊಡನೆ ನನ್ನ ತುಂಟತನದ ಪ್ರತಾಪವನ್ನು ತೋರಿಸಬಾರದೆಂಬುದೇ ಆ ಆಜ್ಞೆಯ ಸಾರಾಂಶವು ಕಾಂಗ್ರೆಸ್ಸಿನವರಿಗಿದ್ದ ಹಾಗೆ ಶಾಸನಭಂಗವನ್ನು ನಡೆಯಿಸುವ ಎದೆಗಾರಿಕೆಯು ನನಗಿಲ್ಲವೆಂದು ಹೇಳಬಹುದು ಒಂದು ವೇಳೆ ಆಜ್ಞಾಭಂಗವನ್ನು ಗೈದರೆ, ಪೋಲೀಸಿನವರ ಲಾಠೀ ಚಾರ್ಜಿಗಿಂತಲೂ ಮಿಗಿಲಾದ ನಮ್ಮಣ್ಣನ ಲಾಠೀ ಪ್ರಹಾರಗಳು ನನ್ನ ಈ ಬಡ ಬೆನ್ನಿನ ಮೇಲೆ ಆಶ್ರಯವನ್ನು ಹೊಂದುವುವು, ಎಂಬ ಮನವರಿಕೆಯು ನನಗಿದ್ದಿತು ಹೇಗೋ ನೆಸಿದ ಬೆಕ್ಕಿನ ಹಾಗೆ ಯಾರ ಗೋಜಿಗೂ ಹೋಗದೆ, ಒಂದು ಮೂಲೆಯಲ್ಲಿ ನಾನು ಆ ದಿನಗಳನ್ನು ಕಳೆದೆನು.

ನನ್ನ ಭಾಗ್ಯದಿಂದ ಮನೆಗೆ ಬಂದ ನೆಂಟರು ಕೆಲವು ದಿನಗಳ ನಂತರ ಅತ್ತಿಗೆಯನ್ನು ನಮ್ಮ ಮನೆಯಲ್ಲಿಯೇ ಬಿಟ್ಟು--ಏತಕೆ ಆ ರೀತಿ ತ್ಯಜಿಸಿದರೆಂಬುದು ನನ್ನ ಬಾಲಕ ಮೆದುಳಿಗೆ ಗೊತ್ತಾಗಲಿಲ್ಲ—ಹೊರಟು ಹೋದರು ಅವರು ತೆರಳಿದ ನಂತರ ನನ್ನಲ್ಲಿ ಸ್ವಲ್ಪ ಸರಾಗವಾಗಿ ಉಸಿರಾಡಲು ಧೈರ್ಯವು ಉದಿಸಿತು ನನಗೆ ಇದುವರೆಗೆ ಬಹಳ ಉಷ್ಣವಾಗಿದ್ದ ನಮ್ಮ ಮನೆಯ ವಾತಾವರಣವು ಈಗ ಅದರ ಮೊದಲಿನ ಸ್ಥಿತಿಗೆ ಬಂದು ತಲುಪಿತು.

ನನ್ನ ಅತ್ತಿಗೆಯೊಡನೆ ನಾನೇನೂ ಮಾತಾಡಲು ಹೋಗುತ್ತಿರಲಿಲ್ಲ. ಹೆಂಗಸರ ಜೊತೆಯಲ್ಲಿ ಹರಟೆ ಹೊಡೆಯುತ್ತಾ ಕುಳಿತುಕೊಳ್ಳುವ ಮಗನು ನಾನಾಗಿರಲಿಲ್ಲ. ಮಹತ್ವವಾದ ಕೆಲಸಗಳು ನನಗೆ ನೆರವೇರಿಸಲಿರುತ್ತವೆ; ಆದರೆ ಅವುಗಳು ಯಾವುವೆಂದುದನ್ನು ನೀವು ಪ್ರಶ್ನಿಸಬೇಡಿರಿ. ಏಕೆಂದರೆ, ನೀವು ಆಗ ನನ್ನನ್ನು "ಪೋಲಿ"

ಎಂಬ ವರ್ಗಕ್ಕೆ ಸೇರಿಸಿ ಬಿಡುವಿರಿ, ಎಂಬ ಭಯವು ನನ್ನಲ್ಲಿ ಧಾರಾಳವಾಗಿದೆ. ಒಂದೆರಡು ಬಾರಿ ಅತ್ತಿಗೆಯು ನನ್ನೊಡನೆ ಮಾತಾಡಲು ಪ್ರಯತ್ನಿಸದೆ ಇರಲಿಲ್ಲ. ಆ ಸಂದರ್ಭಗಳಲ್ಲಿ ನಾನು ಒಂದೆರಡು ನುಡಿಗಳಲ್ಲಿಯೇ ಪ್ರತ್ಯುತ್ತರಗಳನ್ನು ನುಡಿದು ಗೌರವಭಾವವನ್ನು ಕೈಕೊಳ್ಳಲು ಎಂದಿಗೂ ಮರೆಯುತ್ತಿರಲಿಲ್ಲ

ಹೀಗೆ ಕೆಲವು ದಿನಗಳು ಕಳೆದುವು. ಒಂದು ದಿನ ನನ್ನ ಕೋಣೆಯಲ್ಲಿ ಕುಳಿತು ನಮ್ಮ ಚಿತ್ರಕಲೆಯ ಉಪಾಧ್ಯಾಯರು ಬರೆಯಲು ಕೊಟ್ಟಿದ್ದ ಒಂದು ಹಸುವಿನ ಚಿತ್ರವನ್ನು ಬರೆಯುವುದರಲ್ಲಿ ನಾನು ಮಗ್ನನಾಗಿದ್ದೆನು. ನನಗೆ ಚಿತ್ರ ಬರೆವಣಿಗೆಯು ಸೇರದು. ಈಗಲೂ ಹಾಗೆಯೇ ಎಂದು ಹೇಳಬಹುದು. ಶಾಲೆಯಲ್ಲಿ ಚಿತ್ರಕಲಾಭ್ಯಾಸವನ್ನು ಏಕೆ ಏರ್ಪಡಿಸಿರುವರೆಂಬುದು ನನಗೆ ಒಂದು ಸೋಜಿಗವಾಗಿದ್ದಿತು. ಒಂದು ವೇಳೆ ನನ್ನ ಹಾಗಿರುವ ಹುಡುಗರನ್ನು ಹುರಿದು ತಿನ್ನಲಿಕ್ಕೆ ಆಗಿರಬಹುದೆಂದು ನನ್ನ ಅಂದಿನ ಊಹೆಯು! ನನ್ನ ಚಿತ್ರಕಲಾಧ್ಯಾಪಕರನ್ನು ನೆನಸಿಕೊಳ್ಳುವಾಗ, ಈಗಲೂ ನನ್ನ ಮೈಮೇಲಿನ ರೋಮಗಳು ಎದ್ದು ನಿಲ್ಲುತ್ತಲಿರುವವು! ಚಿತ್ರಕಲೆಯನ್ನು ಕುರಿತು ಚಿಂತಿಸುವಾಗ, ಕೈಯ್ಯಲ್ಲಿ ಬೆತ್ತವನ್ನು ಹಿಡಿದು ಸರ್ಕಸ್ಸಿನಲ್ಲಿ ಹುಬ್ಬುಗಂಟಿಕ್ಕಿಕೊಂಡು ಹುಲಿ ಸಿಂಹ ಇತ್ಯಾದಿ ಕ್ರೂರ ಮೃಗಗಳನ್ನು ಆಡಿಸುತ್ತಲಿರುವ ರಿಂಗಮಾಸ್ಟರನ ಹಾಗಿರುವ ನಮ್ಮ ಚಿತ್ರಕಲಾಚಾರ್ಯನ ರುದ್ರರೂಪವು ನನ್ನ ಮನಶ್ಚಕ್ಷುಗಳ ಮುಂದೆ ತಾಂಡವವಾಡುತ್ತಲಿರುವುದು. ಇಂಥ ಒಬ್ಬ ಆಚಾರ್ಯನ ಬಳಿಯಲ್ಲಿ ಚಿತ್ರಕಲೆಯಲ್ಲ ಅಭಿರುಚಿಯಿಲ್ಲದ ಒಬ್ಬ ಮೂಢ ವಿದ್ಯಾರ್ಥಿಯ ಪರಿಸ್ಥಿತಿಯು ಹೇಗಿರಬಹುದೆಂಬದನ್ನು ನೀವೇ ಊಹಿಸಿಕೊಳ್ಳಿರಿ! ತೋಳದ ಮುಂದುಗಡೆ ನಿಂತಿರುವ ಕುರಿಮರಿಯ ಚಿತ್ರವು ನನ್ನ ಸಂಕಟವನ್ನು ತಮಗೆ ತಿಳಿಸುವುದಕ್ಕೆ ಪರ್ಯಾಪ್ತರೂಪವಾಗಿರಬಹುದೆಂದು ಊಹಿಸುತ್ತೇನೆ. ಆ ಮುಂಡೇ.... ತಪ್ಪಾಯ್ತು; ಆಚಾರ್ಯ ನಿಂದನೆಯು ಮಹಾಪಾತಕವೆಂದು ಶ್ರುತಿ-ಸ್ಮೃತಿಗಳು ಸಾರುತ್ತಿರುವವಂತೆ! ಶ್ರುತಿವಚನವನ್ನುಲ್ಲಂಘಿಸುವ ಎದೆಗಾರಿಕೆಯು ನನಗಿಲ್ಲ. ನಮ್ಮ ಚಿತ್ರಕಲಾಚಾರ್ಯನ ಬೆತ್ತದ ಲತ್ತೆಗಳನ್ನು ನನ್ನ ಈ ಬಡ ಬೆನ್ನು ಸಹಿಸಿರುವಷ್ಟು ಆಗಸನ ಕತ್ತೆಯೂ ಸಹ ಸಹಿಸಲಾರದು

ನಾನು ನನ್ನ ಕೋಣೆಯಲ್ಲಿ ಕುಳಿತು ಹಸುವಿನ ಚಿತ್ರವನ್ನು ಬರೆಯುವುದರಲ್ಲಿ ನಿರತನಾಗಿದ್ದೆನು. ನಾನು ಬರೆಯಲು ಪ್ರಯತ್ನಿಸುತ್ತಿದ್ದುದು ಹಸುವಿನ ಚಿತ್ರವನ್ನಾಗಿದ್ದಿತು; ಆದರೆ ಅಂತ್ಯದಲ್ಲಿ ಆ ಪ್ರಯತ್ನವು ಒಂದು ಕತ್ತೆಯ ಅಥವಾ ಒಂಟೆಯ ಆಕಾರವನ್ನು ಹೊಂದುತ್ತಲಿದ್ದಿತು! ಕಾಗದವನ್ನು ರಬ್ಬರಿನಿಂದ ಉಜ್ಜಿ ಪುನಃ ಬರೆಯಲು ಪ್ರಯತ್ನಿಸಿದೆನು, ಆದರೆ ನನ್ನ ಪ್ರಯತ್ನವು ಯಶಸ್ವಿಯಾಗಲಿಲ್ಲ. ಪ್ರತಿಯೊಂದು ಸಾರೆಯೂ ನಾನು ಬರೆಯುತ್ತಲಿದ್ದ ಚಿತ್ರವು ಕತ್ತೆಯ ಅಥವಾ ಹಂದಿಯ ಆಕಾರವಾಗುತ್ತಿದ್ದಿತಲ್ಲದೆ ಹಸುವಿನ ರೂಪವಾಗುತ್ತಿರಲಿಲ್ಲ. ಈ ಪ್ರಯತ್ನಗಳು ಈ ರೀತಿ ಪ್ರತಿಯೊಂದು ಸರತಿಯೂ ಪರಾಜಯವನ್ನು ಹೊಂದುತ್ತಿರುವುದನ್ನು

ನೋಡಿ, ನನ್ನ ಎದೆಯಲ್ಲಿ ಭಯವು ಅಂಕುರವನ್ನು ಹೊಂದಿ, ಬೆಳೆಯಲಾರಂಭ ವಾಯಿತು. ನಮ್ಮ ಚಿತ್ರಕಲಾಚಾರ್ಯನಿಂದ ಮರುದಿನ ನನಗೆ ಸಿಗುವ 'ಅರ್ಚನೆ' ಯ ಕಲ್ಪನೆಯು ನನ್ನ ಮೆದುಳನ್ನು ತಿನ್ನಲು ತೊಡಗಿತು. ನಿರಾಶನಾಗಿ ಅತ್ತು ಬಿಟ್ಟೆನು!

ನನ್ನ ಈ ಅವಸ್ಥೆಯನ್ನು ನೋಡಿ 'ಘೊಳ್ಳೆ'ಂದು ನಕ್ಕ ಒಂದು ಶಬ್ದವು ನನ್ನ ಶ್ರವಣೇಂದ್ರಿಯಗಳಲ್ಲಿ ಪ್ರವೇಶಿಸಿತು. ನಾನು ಆಸನದಿಂದ ಎದ್ದು ಹಿಂದಿರುಗಿ ನೋಡಿದೆನು. ನಾನು ಬರೆದ ಚಿತ್ರವನ್ನವಲೋಕಿಸಿ ನನ್ನ ಅತ್ತಿಗೆಯು ನಗುತ್ತ ಲಿದ್ದಳು. ಒಬ್ಬನು ತನ್ನ ಪ್ರಯತ್ನವನ್ನು ಮಾಡಲು ಅಸಮರ್ಥನಾಗಿ ಸಂಕಟ ದಲ್ಲಿರುವಾಗ, ಬೇರೊಂದು ವ್ಯಕ್ತಿಯು ಅವನನ್ನು ಹಾಸ್ಯ ಮಾಡುತ್ತಲಿದ್ದರೆ ಮಾನುಷ ಬುದ್ಧಿಯು ಅದನ್ನು ಹೇಗೆ ತಾನೆ ಮೌನದಿಂದ ಸಹಿಸುವುದು? ನಾನು ಸಿಟ್ಟಿನಿಂದ ಕುಳಿತಿದ್ದ ಸ್ಟೂಲನ್ನು ಒಂದು ಭಾಗಕ್ಕೆ ತಳ್ಳುತ್ತಾ ಎದ್ದು ನಿಂತೆನು.

'ನೀನೇಕೆ ನಗುತ್ತೀ? ನನ್ನ ಸಂಕಟವನ್ನು ದೇವರೇ ಬಲ್ಲನು!' ಎಂದು ನುಡಿದು, ನಾನು ಅಳತೊಡಗಿದೆನು

"ನೀನು ಬರೆದಿರುವ ಚಿತ್ರವು ಏನು? ಇದನ್ನು ನೋಡುವಾಗ ನನಗೆ ನಗು ಬರುತ್ತಲಿರುವದು" ಎಂದು ಅತ್ತಿಗೆಯು ತನ್ನ ಎದೆಯಲ್ಲಿ ಉಕ್ಕಿ ಹರಿಯುತ್ತಿರುವ ನಗುವನ್ನು ನಿಲ್ಲಿಸಲು ಪ್ರಯತ್ನಿಸುತ್ತಾ ನುಡಿದಳು

"ಹಸುವಿನದು" ಎಂದೆನು ನಾನು.

"ಹಂದಿಯ ರೂಪವಾಗಿ ನನಗೆ ತೋರುವುದು" ಎಂದು ಅವಳು ಹೇಳಿದಳು.

"ಅತ್ತಿಗೆ, ಸುಮ್ಮನೆ ನನ್ನನ್ನು ರೇಗಿಸಬೇಡ; ನನ್ನ ಸ್ವಭಾವವು ತಿಳಿದಿರಲಿಕ್ಕಿಲ್ಲ ನಿನಗೆ! ನನಗೆ ಚಿತ್ರ ಬರೆಯಲು ತಿಳಿಯದು ಅದಕ್ಕೇಕೆ ಇಷ್ಟು ನಗಬೇಕು? ನಾಳೆ ನಮ್ಮ ಮೇಷ್ಟ್ರರಿಂದ ನನಗೆ ಸಿಗುವ ಸನ್ಮಾನವನ್ನು ವಿಚಾರಿಸುವಾಗ ನನಗೆ ಭಯ ವಾಗುತ್ತಲಿದೆ" ಎಂದು ಹೇಳುವಾಗ, ನನ್ನ ಕಣ್ಣುಗಳಿಂದ ಬಾಷ್ಪವು ಉಕ್ಕಿ ಹರಿದಿತು.

ನನ್ನ ಆಗಲಿನ ಅವಸ್ಥೆಯನ್ನು ಕಂಡು ಅವಳ ಮನಸ್ಸಿನಲ್ಲಿ ಮರುಕವು ಜನಿ ಸಿತು ನಿಜವಾಗಿಯೂ ನನ್ನ ಆಗಲಿನ ದೈನ್ಯಭಾವವು ಯಾರಲ್ಲಿಯೂ ಕರುಣೆಯನ್ನು ಉಂಟು ಮಾಡಲು ಪರ್ಯಾಪ್ತವಾಗಿದ್ದಿತು ಅವಳು ಮೃದುಮಧುರವಾದ ಸ್ವರ ದಲ್ಲಿ "ಶೀನು, ನಾನು ಬರೆದು ಕೊಡಲೆ?" ಎಂದಳು.

"ಚಿತ್ರ ಬರೆಯಲು ನೀನು ಕಲಿತಿದ್ದರೆ ಬರೆದು ಕೊಡು; ಹೇಗಾದರೂ ಉಪ ಕಾರ ಮಾಡು ಅಂದರೆ ನಾಳೆಯದಿನ ಆ ತೋಳದ ಬಾಯಿಯಿಂದ ಪಾರಾಗಬಹುದು." ಎಂದು ಆಶಾಪರಿಪೂರ್ಣವಾದ ಸ್ವರದಲ್ಲಿ ನಾನು ನುಡಿದೆನು.

"ಒಂದು ವೇಳೆ ನಗೆಯನ್ನು ಹೊರಚೆಲ್ಲಿ, ಅತ್ತಿಗೆಯು ಸ್ಟೂಲಿನ ಮೇಲೆ ಕುಳಿತು ಕೊಂಡಳು. ಕೈಯಲ್ಲಿ ಪೇನ್ಸಿಲನ್ನು ಹಿಡಿದು ಅವಳು ಚಿತ್ರಬರೆಯಲು ಉದ್ಯುಕ್ತ ಳಾದಳು. ನಾನು ಚಿತ್ರ ಬರೆಯುವ ಪ್ರಯತ್ನದಲ್ಲಿ ಹತ್ತು-ಹನ್ನೆರಡು ಸಾರಿ

ಪುಸ್ತಕದಲ್ಲಿ ಬರೆದುದನ್ನು ಉಜ್ಜಿದುದರಿಂದ, ಆ ಹಾಳೆಯು ಹರಿದು ಹೋಗಲಿಕ್ಕೆ ಆಗಿದ್ದಿತು. ಆ ಹಾಳೆಯಲ್ಲಿ ಅಲ್ಲಲ್ಲಿ ತೂತುಗಳು ಬಿದ್ದಿದ್ದುವು. ಅದರ ಮೇಲೆ ಚಿತ್ರಿಸಲು ಸಾಧ್ಯವಿರಲಿಲ್ಲ ಅವಳು ಪುಸ್ತಕದಿಂದ ಆ ಹಾಳೆಯನ್ನು ಹರಿದು ಬಿಸುಟಿದಳು

ಬೇರೊಂದು ಹಾಳೆಯಲ್ಲಿ ಅವಳು ಚಿತ್ರವನ್ನು ಬರೆಯತೊಡಗಿದಳು. ನಾನು ಅವಳು ಕುಳಿತಿರುವ ಸ್ಟೂಲಿನ ಹಿಂಬದಿಯಲ್ಲಿ ನಿಂತು, ಅವಳ ಬೆನ್ನಿನ ಮೇಲೆ ನನ್ನ ಎರಡೂ ಕರಗಳನ್ನು ಮಡಗಿ, ಅವಳು ಚಿತ್ರಬರೆಯುವುದನ್ನು ನೋಡಲಾರಂಭಿಸಿದೆನು. ಅತ್ತಿಗೆಯು ಹಸುವಿನ ಕೊಂಬುಗಳು, ಕೈ, ಬಾಲ, ಮುಖ ಇವುಗಳನ್ನು ಒಂದೊಂದಾಗಿ ಬರೆದಳು. ಅರ್ಧತಾಸಿನಲ್ಲಿಯೇ ಚಿತ್ರವು ಪೂರ್ತಿಯಾಯಿತು. ಅದು ನಿಜವಾಗಿಯೂ ಒಂದು ಹಸುವಿನ ಚಿತ್ರವಾಗಿದ್ದಿತು ಎಂದು ಮಾತ್ರವಲ್ಲ; ನೋಡಲು ಅತ್ಯಂತ ಸುಂದರವಾಗಿದ್ದಿತು. ನಾನು ಬಹು ಸಂತೋಷದಿಂದ ಕುಣಿಯುತ್ತಾ ಕೈ ಚಪ್ಪಾಳೆ ಹೊಡೆದೆನು ನನ್ನ ಈ ಮಂಗತನವನ್ನು ಕಂಡು ಅವಳು ನಕ್ಕಳು.

"ನೀನು ಬರೆದಿರುವ ಹಸು ನಮ್ಮ ಗಂಗೆಗಿಂತಲೂ ಚೆಲುವಾಗಿದೆ" ಎಂದು ನಾನು ಅವಳನ್ನು ಅನುಮೋದಿಸಿದೆನು. ಇದುವರೆಗೆ ಅವಳು ಹಳ್ಳಿಗಾಡಿನ ಕಗ್ಗಹೆಂಗಸೆಂದು ನಾನು ಭಾವಿಸಿದ್ದೆನು ಈಗ ಹಾಗಲ್ಲ, ಅವಳಿಗೂ ಆ ತಿಳಿವು ಇದೆ, ಎಂಬುದನ್ನು ಅರಿತೆನು ಆ ಮೇಲೆ ಅವಳು ಶಾಲೆಯಲ್ಲಿ IV ಫಾರಂ ವರೆಗೆ ವ್ಯಾಸಂಗ ಮಾಡಿದ ಹುಡುಗಿ ಎಂಬುದು ತಿಳಿಯಬಂದಿತು.

ನಾನು ಇದುವರೆಗೆ ಅವಲಂಬಿಸಿದ್ದ ಗೌರವಭಾವವು ನನ್ನಿಂದ ದೂರವಾಯಿತು. ನಾನೂ ಅತ್ತಿಗೆಯೂ ದೊಡ್ಡ ಗೆಳೆಯರಾದೆವು. ಪಾಪ! ಅವಳಾದರೂ ಏಕಾಕಿನಿಯಾಗಿ ನಮ್ಮಲ್ಲಿ ಹೇಗೆ ಹೊತ್ತನ್ನು ಕಳೆಯುವಳು? ಅಣ್ಣನೊಡನೆ ಸರಾಗವಾಗಿ ಮಾತಾಡಲು ನಾಚಿಕೆಯು ಅವಳನ್ನು ಬಿಡದೆ, ತನ್ನ ಗಂಡಂದಿರೊಡನೆ ಸರಾಗವಾಗಿ ಮಾತಾಡಲು ಹೆಂಗಸರಿಗೇಕೆ ಇಷ್ಟು ಲಜ್ಜೆ? ಎಂದು ಸಂಶೋಧನೆಗಳನ್ನು ನಡೆಯಿಸಿದೆನು. ಅವುಗಳು ಫಲಕಾರಿಯಾಗಿ ಸಂಭವಿಸಿದ್ದರೆ ನಾನು ಜೆ. ಸಿ. ಬೋಸರಿಗಿಂತಲೂ ಮಿಗಿಲಾದ ಹೆಸರನ್ನು ಸಂಪಾದಿಸುವುದರಲ್ಲಿ ನನಗೆ ಯಾವ ಸಂಶಯವೂ ಇರಲಿಲ್ಲ.

ಮರುದಿನ ಶಾಲೆಯಲ್ಲಿ ನಮ್ಮ ಚಿತ್ರಕಲಾಚಾರ್ಯರ ಕೋಪಕ್ಕೆ ಪಾತ್ರೀಭವಿಸಲಿಲ್ಲ. ಅದೂ ಅಲ್ಲದೆ ಅವರ ಪ್ರಶಂಸೆಗಳಿಗೂ ಪಾತ್ರನಾದೆನು. ಎಲ್ಲವೂ ಅತ್ತಿಗೆಯ ಪ್ರಭಾವವೆಂದು ನನ್ನ ಮನಸ್ಸಿನಲ್ಲಿಯೇ ಹೇಳಿಕೊಂಡೆನು ಅವಳು ಬರೆದುಕೊಟ್ಟ ಆ ಚಿತ್ರಕ್ಕೆ ೬ ಮಾರ್ಕುಗಳು ಲಭಿಸಿದುವು. ಚಿತ್ರ ಬರವಣಿಗೆಯಲ್ಲಿ ಕ್ಲಾಸಿನಲ್ಲಿ ನಾನೇ ಆ ದಿನ ಪ್ರಥಮಸ್ಥಾನವನ್ನು ಪಡೆದವನಾಗಿದ್ದೆನು

ಆ ದಿನ ಅತ್ಯುತ್ಸಾಹದಿಂದ ಮನೆಗೆ ಹಿಂದಿರುಗಿ ಬಂದೆನು. ಕ್ಲಾಸಿನಲ್ಲಿ ನಾನೇ ಪ್ರಥಮಸ್ಥಾನವನ್ನು ಪಡೆದವನಾಗಿದ್ದುದರಿಂದ ನನ್ನ ಮನಸ್ಸು ಚಂಡಿನಂತೆ ಆಹ್ಲಾದಭರಿತವಾಗಿ ಹಿಗ್ಗುತ್ತಲಿದ್ದಿತು. ಮನೆಯೊಳಗೆ ನುಗ್ಗಿದೊಡನೆಯೇ 'ಅತ್ತಿಗೆ

ಅತ್ತಿಗೆ!' ಎಂಬುದಾಗಿ ನಾನು ಕೂಗಿದೆನು.

"ಏನಪ್ಪಾ ಶೀನು?" ಎಂದಳು ಅವಳು.

ಅತ್ತಿಗೆಯು ಬರೆದ ಆ ಚಿತ್ರವು ನನಗೂ ಅತ್ತಿಗೆಗೂ ನಡುವೆ ಇರುವ ಅಂತರವನ್ನು ದಾಟಲಿರುವ ಒಂದು ಸೇತುವೆಯಾಗಿ ಪರಿಣಮಿಸಿತೆಂಬುದನ್ನು ನಾನೆಂದಿಗೂ ಮರೆಯತಕ್ಕವನಲ್ಲ. ಅವಳ ಹಾಗೆ ಸ್ನೇಹ, ಸರಳತೆ ಔದಾರ್ಯ ಇವುಗಳಿಂದ ಭರಿತವಾದ ಹೃದಯವನ್ನು ನಾನು ಬೇರೊಂದನ್ನು ಕಂಡಿರಲಿಲ್ಲ. ನನ್ನ ಬದುಕಿನಲ್ಲಿ ಅತ್ತಿಗೆಯು ಇರದಿದ್ದರೆ, ಜೀವನವು ಅದಾವ ರೂಪವನ್ನು ಹೊಂದುತ್ತಲಿದ್ದಿತೆಂಬದನ್ನು ಹೇಳಲಾಗುವುದಿಲ್ಲ. ನನ್ನ ಬಾಳಿನ ರೂಪು ಅವಳ ಕರಕೌಶಲ್ಯದಿಂದ ಸರಿಯಾಗಿ ಬರೆಯಲ್ಪಟ್ಟಿತೆಂಬದನ್ನು ನಾನು ಬಲ್ಲೆನು ಅದು ಹೇಗೆ? ಎಂಬುದನ್ನು ನಾನು ಮುಂದಿನ ಅಧ್ಯಾಯಗಳಲ್ಲಿ ನುಡಿಯುವೆನು.

ಅತ್ತಿಗೆಯು ನನ್ನನ್ನೇಕೆ 'ಶೀನು' ಎಂಬುದಾಗಿ ಏಕವಚನದಲ್ಲಿ ಕರೆಯುತ್ತಿರುವಳೆಂಬುದು ನನಗೆ ತೋಚದು. ನಾನು ಅವಳ ಭಾವನಲ್ಲವೆ? ಹಾಗಿರಲು ಅವಳು ನನ್ನನ್ನೇಕೆ ಭಾವನೆಂಬುದಾಗಿ ಸಂಬೋಧಿಸಕೂಡದು? ಹಾಗೆ ಕರೆಯಿಸಿಕೊಳ್ಳುವುದು ಒಂದು ಗೌರವವೆಂದಾಗಿದ್ದಿತು ನನ್ನ ಅಂದಿನ ಭಾವನೆಯು. ಒಂದು ದಿನ ನಾನು ಆಕೆಯನ್ನು ಪ್ರಶ್ನಿಸಿದೆನು "ಅತ್ತಿಗೆ, ನೀನೇಕೆ ನನ್ನನ್ನು ಭಾವ ಎಂದು ಕರೆಯುವದಿಲ್ಲ" ಎಂಬುದಾಗಿ.

"ಏನು? ನಿನ್ನನ್ನು ಭಾವ ಎಂಬುದಾಗಿ ಕೂಗಬೇಕೆ?" ಎಂದು ಅವಳು ಆಶ್ಚರ್ಯವನ್ನು ಹೊರಚಲ್ಲುವ ನಗುವಿನೊಡನೆ ನುಡಿದಳು.

"ಹೌದು! ನಾನು ನಿನಗೆ ಭಾವನಲ್ಲವೇ?"

"ತಪ್ಪಾಯಿತು! ಭಾವಯ್ಯನವರೇ, ಕ್ಷಮಿಸಿರಿ" ಎಂದು ಅವಳು ಹೇಳಿದಳು ನನ್ನನ್ನು ಪರಿಹಾಸ ಮಾಡುವುದಕ್ಕಾಗಿ

ಕೆಲವು ದಿನಗಳ ಪರ್ಯಂತ ಅತ್ತಿಗೆಯು ನನ್ನನ್ನು "ಭಾವ" ಎಂದೇ ಕೂಗುತ್ತಲಿದ್ದಳು. ಆದರೆ "ಶೀನು" ಎಂಬ ಶಬ್ದದಲ್ಲಿರುವ ಸರಳತೆ, ಪ್ರೇಮ, ಗೆಳೆತನ, ಇವುಗಳು "ಭಾವ" ಎಂಬ ಪದದಲ್ಲಿರಲಿಲ್ಲ ಇದು ಒಂದು ಕೃತ್ರಿಮದ ಸಂಬೋಧನೆಯಾಗಿದೆ ಎಂಬುದು, ನನಗೆ ಹೊಳೆಯದೆ ಇರಲಿಲ್ಲ. ಆದರೂ 'ಭಾವ' ಎಂದು ಕರೆಯಿಸಿಕೊಳ್ಳಬೇಕೆಂಬ ನನ್ನ ಹೆಮ್ಮೆಯು ದೀಪವು ನಂದಲಿಲ್ಲ; ಆದರೆ ನನಗೆ ಈ ಕೃತಕ ಮೇರೆಯಿಂದ ಮನಸ್ಸಿನಲ್ಲಿಯೇ ಸ್ವಲ್ಪ ಬೇಸರವಾಗತೊಡಗಿತು ಅಂತ್ಯದಲ್ಲಿ 'ಭಾವ' ನಾಗಿರುವುದರ ಬದಲು ಬರಿಯ 'ಶೀನು' ವಾಗಿದ್ದರೆ ಸಾಕು, ಎಂಬ ನಿರ್ಧಾರಕ್ಕೆ ತಲುಪಿದೆನು.

ಒಂದು ದಿನ ನಾನು ಬೇಸರದಿಂದ ಕೂಡಿದವನಾಗಿ ಅತ್ತಿಗೆಯಿದ್ದಲ್ಲಿಗೆ ತೆರಳಿದೆನು. 'ಅತ್ತಿಗೆ' ಎಂದು ನಾನು ಕೂಗಿದೆನು.

"ಏನು ಭಾವ!" ಎಂಬ ಪ್ರತ್ಯುತ್ತರವು ಲಭಿಸಿತು.

'ಅತ್ತಿಗೇ, ನನ್ನನ್ನು ಭಾವ ಎಂದು ಕೂಗದಿರು. ಶೀನು ಎಂದು ಕರೆದರೆ ಸಾಕು'

"ಅದೇಕೆ ಭಾವ, ಹಾಗೆ ಹೇಳ್ತೀ?"

"'ಶೀನು'ವಾಗಿರುವಾಗ ಲಭಿಸುವ ಆನಂದವು 'ಭಾವ'ನಾಗಿರುವಾಗ ಸಿಗುವುದಿಲ್ಲ. ಶೀನು ಎಂದು ಕರೆಯಬೇಕು" ಎಂದೆನು ನಾನು.

"ಶೀನು! ಹಾಗೆಯೇ ಆಗಲಿ. ನಿನ್ನ ತಾಳ ಹಾಡಕ್ಕೆ ನಾನು ಕುಣಿಯುವೆನು" ಎಂದಳು ಅವಳು.

ನನ್ನ ಎದೆಯಲ್ಲಿ ವ್ಯಾಪಿಸಿದ್ದ ಬೇಸರದ ಮುಗಿಲು ಆನಂದದ ಗಾಳಿಯಲ್ಲಿ ಸಿಲುಕಿ ಹಾರಿ ಹೋಯಿತು.

---

[೬]

ಅತ್ತಿಗೆಯು ನನ್ನ ಜೀವನದ ಕಲ್ಪತರು. ನನ್ನ ಆಶೆಗಳು, ಬಯಕೆಗಳು ಇವುಗಳನ್ನು ಪೂರ್ತಿಗೊಳಿಸಲು ಅವಳು ಸಿದ್ಧಳಾಗಿದ್ದಳು. ಬಾಲ್ಯದಲ್ಲಿಯೇ ನನ್ನ ತಾಯಿಯು ಸ್ವರ್ಗಪಥದಲ್ಲಿ ತನ್ನ ಪ್ರಯಾಣವನ್ನು ಮುಂದರಿಸಿದುದರಿಂದ ಮಾತೃಹಸ್ತಗಳ ಲಾಲನೆ-ಪಾಲನೆಗಳನ್ನು ಆಸ್ವಾದಿಸುವ ಭಾಗ್ಯವು ನನಗೆ ಲಭಿಸಿರಲಿಲ್ಲ. ತಂದೆಯು ನನ್ನ ಬಾಲ್ಯದಲ್ಲಿಯೇ ಮೃತನಾಗಿದ್ದರೂ ತಂದೆಯಂತೆ ನನ್ನನ್ನು ಅತ್ಯಂತ ವಾತ್ಸಲ್ಯದಲ್ಲಿ ನೋಡಿ ಸಂರಕ್ಷಿಸುವ ಅಣ್ಣನು ನನಗೆ ಲಭಿಸಿದ್ದನು. ಅವನ ಪ್ರೇಮಮಯ ಪೋಷಣೆಯು, ಪಿತೃಹಸ್ತದ ಲಾಲಸೆಗೆ ತುಲ್ಯವಾಗಿದ್ದಿತು.

ಎದೆಯಲ್ಲಿ ತಾಯಿಯ ಮೃದುಮಧುರವಾದ ಪೋಷಣೆಯನ್ನು ಆಸ್ವಾದಿಸಬೇಕೆಂಬ ಬಯಕೆಯು ಕುದಿಯುತ್ತಿರುವಾಗ ಅಮ್ಮನ ಚಿತ್ರವನ್ನು ಮನಸ್ಸಿನಲ್ಲಿಯೇ ಸಂಕಲ್ಪಿಸಿಕೊಂಡು ಬರೆಯುತ್ತಿರುವಾಗ, ನನ್ನ ಜೀವನವು ಒಂದು ಮೋಟರು ಯಂತ್ರದಂತೆ, ನಿರುತ್ಸಾಹಮಯವಾಗಿದ್ದಾಗ, ಮನಸ್ಸಿನಲ್ಲಿಯೇ ಪ್ರೇಮಮಯವಾದ ಚಿತ್ರವನ್ನು ಬರೆಯಲು ಪ್ರಯತ್ನಿಸುತ್ತಲಿದ್ದ ನನ್ನ ಬುದ್ಧಿಗೆ ಒಂದು ಸಜೀವ ಮಾತೃತೆಯನ್ನು ತೋರಿಸಿಕೊಟ್ಟು, ನನ್ನ ಜೀವನದ ಮರುಭೂಮಿಯನ್ನು ನಾಕದ ನಂದನವನವನ್ನಾಗಿ ಮಾಡಿ, ನವಮಧುವನ್ನು ನನ್ನ ಬದುಕಿನಲ್ಲಿ ಚೆಲ್ಲಿದವಳು ನನ್ನ ಅತ್ತಿಗೆಯಾಗಿರುತ್ತಾಳೆ.

ಆ "ನನ್ನ ಅತ್ತಿಗೆ" ಎಂಬ ಆ ಐದು ಅಕ್ಷರಗಳನ್ನು ನಾನೀಗ ನೊಂದ ವೇಳೆಯಲ್ಲಿ, ಜೀವನದ ಕದನದಲ್ಲಿ, ಸೋತಿರುವ ಸಮಯದಲ್ಲಿ ನನ್ನ ಮನಸ್ಸಿನಲ್ಲಿಯೇ ಜಪಿಸುತ್ತಿರುವೆನು. ಅವು ನನ್ನ ಮನಸ್ಸಿಗೆ ಅನಲ್ಪವಾದ ಶಾಂತಿಯನ್ನು ನೀಡುತ್ತಲಿರುವುವು. ನನ್ನ ಆಶಯಗಳು ನನ್ನ ಆದರ್ಶವ್ಯಕ್ತಿಗಳು, ಇವುಗಳಿಗಿಂತ ಉನ್ನತವಾದ ಒಂದು ಸ್ಥಾನವನ್ನು ನನ್ನೆದೆಯಲ್ಲಿ ಅತ್ತಿಗೆಗೆ ನಾನು ನೀಡಿರುವೆನು. ಆ ಪುಣ್ಯಸ್ವರೂಪಿಣಿಯು ನನ್ನ ಜೀವನದ ರಂಗಭೂಮಿಯಲ್ಲಿ ಪ್ರವೇಶಿಸದಿದ್ದರೆ, ನನ್ನ ಬಾಳು ಮರುಗಾಡಿನದಾಗುತ್ತಲಿದ್ದಿತು. ತಾಯಿಯ ಪ್ರೇಮ, ಅಕ್ಕನ ಅಕ್ಕರೆ, ಗೆಳತಿಯ ಒಲವು ಈ ಮೂರನ್ನೂ ನಾನು ನನ್ನ ಅತ್ತಿಗೆಯಲ್ಲಿ ಸವಿಯುತ್ತಿರುವೆನು.

ನನ್ನ ವಿಚಾರದ ಅಂಗಗಳಿಂದ ಓದುಗರ ಪ್ರಶ್ನೆಗಳನ್ನು ನೋಡಿದರೂ ಹಿಸುವುದು ಉಚಿತವಲ್ಲವೆಂದು ಭಾವಿಸಿ, ನನ್ನ ವಿಚಾರವೆಂಬ ಉಪಾಧಿಯ ಲಗಾಮುಗಳನ್ನು ನಾನು ಹಿಡಿದು ಇಲ್ಲಿ ನಿಲ್ಲಿಸುವೆನು.

ಅತ್ತಿಗೆಯು ನಮ್ಮ ನಿಕೇತನದಲ್ಲಿ ಪ್ರವೇಶಿಸಿದ ನಂತರ ನಮ್ಮ ಜೀವನದಲ್ಲಿ ನವೋತ್ಸಾಹವು ಸಂಚರಿಸಲು ಪ್ರಾರಂಭವಾಯಿತೆಂಬುದು ಹಿಂದೆಯೇ ಹೇಳಿರುವೆನಷ್ಟೆ? ಪ್ರತಿಯೊಂದು ಕಾರ್ಯದಲ್ಲಿಯೂ ಹೊಸತು ಮೊಳೆಯಲಾರಂಭಿಸಿತು. ನಮ್ಮ ಮನೆ ಯಲ್ಲಿ ಹೂದೋಟವಿರಲಿಲ್ಲ. ಅಣ್ಣನಿಗೆ ಆ ರೀತಿಯ ವಿನೋದಗಳಲ್ಲಿ ಆಸಕ್ತಿಯು ಕಡಿಮೆ. ಅವನು ಪುಸ್ತಕದ ಹುಳುವಾಗಿದ್ದರೆ, ನಾನು ತುಂಟರ ದಂಡಿನ ದಳಪತಿ ಯಾಗಿರುವೆನು. ಹೀಗಾದುದರಿಂದ ಹೂದೋಟದಲ್ಲಾಗಲೀ, ಇತರ ಕಲಾವಿನೋದ ಗಳಲ್ಲಿಯಾಗಲೀ ನಮ್ಮಿಬ್ಬರ ಶ್ರದ್ಧೆಯು ಹರಿಸಲಿಲ್ಲ.

ಅತ್ತಿಗೆಗೆ ಹೂವೆಂದರೆ ಜೀವವು ಆನಂದದಿಂದ ತುಂಬಿ ತುಳುಕುತ್ತಿರುವ ಒಂದು ಕುಸುಮವು ಅವಳಾಗಿದ್ದಳು. ಅವಳಲ್ಲಿ ನಮ್ಮ ಮನೆಯ ಮುಂದೆ ಒಂದು ಹೂ ದೋಟವನ್ನು ಬೆಳೆಯಿಸಬೇಕೆಂಬ ಒಂದು ಹಂಬಲವು ಜನಿಸಿತು; ಆದರೆ ಅದನ್ನು ಅಣ್ಣನಿಗೆ ಅರುಹಲು ಧೈರ್ಯವು ಅವಳಲ್ಲಿರಲಿಲ್ಲ. ಶೋಕಾತ್ಮಕ ಸ್ವಭಾವಿಯಾದ ಅವನ ಚಿತ್ತವೃತ್ತಿಯನ್ನು ಗಾರ್ಹಿಕ ಕಾರ್ಯಗಳಿಂದ ತೊಂದರೆಗೊಳಿಸುವುದು ಉಚಿತವೆಂದು ಅವಳು ಎಣಿಸಲಿಲ್ಲ. ಅವಳು ತನ್ನ ಸಲಹೆಯನ್ನು ನನಗೆ ಸೂಚಿಸಿ ದಳು. ಅವಳ ಈ ಹೂದೋಟ ರಚನೆಯ ಕಾರ್ಯಕ್ರಮದಲ್ಲಿ ನಾನು ಹೆಗಲು ಕೊಟ್ಟು ನಿಲ್ಲುವುದಾಗಿ ಭರವಸೆಯನ್ನು ನೀಡಿದೆನು.

ಮರುದಿನವೇ ಕೆಲಸಕ್ಕೆ ಪ್ರಾರಂಭವಾಯಿತು. ನಮ್ಮ ಮನೆಯ ಮುಂದಿನ ಅಂಗಳವನ್ನು ಅಗೆದು ಹೂವಿನ ಬೀಜಗಳನ್ನು ಬಿತ್ತಲಿರುವ ಪಾತಿಗಳನ್ನು (Plots) ನಾನು ಮಾಡಿದೆನು. ಅತ್ತಿಗೆ ಹತ್ತಿರದಲ್ಲಿಯೇ ನಿಂತು ಹೂದೋಟದ ಆಕಾ ರವು ಯಾವ ರೀತಿಯಲ್ಲಿರಬೇಕೆಂಬುದನ್ನು ನನಗೆ ನೆಲದಲ್ಲಿ ಗುರುತು ಹಾಕಿ ತೋರಿಸಿ ಕೊಟ್ಟಳು. ನಾನು ಅಗೆದು ಒಂದೊಂದು ಪಾತಿಯನ್ನು ಮಾಡಿ ವಿಂಗಡಿಸಿದೆನು. ಹೂ ವಿನ ಬೀಜಗಳನ್ನು ತಂದು ನಾವು ಬಿತ್ತಿದೆವು. ಪ್ರತಿದಿನವೂ ಅತ್ತಿಗೆಯೇ ನೀರನ್ನು ಹುಯ್ಯುವಳು.

ಒಂದು ವಾರವು ಗತಿಸಲು ಬೀಜಗಳು ಮೊಳೆತುವು. ಮಣ್ಣನ್ನು ಭೇದಿಸಿ ಕೊಂಡು ಹೊರಗೆ ಬರುತ್ತಿರುವ ಆ ಮೊಳಕೆಗಳನ್ನು ನಾನು ಯಾವುದಕ್ಕೆ ಹೋಲಿ ಸಲಿ? ಪ್ರಕೃತಿಯು ನಿಜವಾಗಿಯೂ ವಿಚಿತ್ರವಾದುದು. ಆ ಮೊಳಕೆಗಳನ್ನು ನೋ- ಡಲು ಚಿಕ್ಕ ಕೂಸುಗಳಂತೆ ಎಷ್ಟು ಚೆಂದವಾಗಿರುತ್ತವೆ! ದಿನದಿನಕ್ಕೆ ಬೆಳೆದು ಗಿಡ ವಾಗುತ್ತಿರುವ ಆ ಮೊಳಕೆಯು ಮನುಷ್ಯನಿಗೆ ಒಂದು ಹೊಸ ಪಾಠವನ್ನು ನೀಡು ತ್ತಿರುವುದು. ಗಿಡಗಳು ಬೆಳೆದು ದೊಡ್ಡವಾದುವು. ಹಲವು ಸಾಲಿ ಗಿಡಗಳಿಗೆ ನೀರ ನ್ನೆರೆಯಲು ಅತ್ತಿಗೆಗೆ ನಾನೂ ಸಹಾಯವನ್ನು ನೀಡುತ್ತಿದ್ದೆನು. ಪಾತಿಗಳಲ್ಲಿ ಬೆಳೆ

ಯುತ್ತಿದ್ದ ಕಳೆಗಳನ್ನು ಕಿತ್ತು ಹಾಕುತ್ತಲಿದ್ದೆವು; ಗಿಡಗಳಿಗೆ ಗೊಬ್ಬರವನ್ನು ಹಾಕುತ್ತಲಿದ್ದೆವು.

ಈ ಕಾಲದಲ್ಲಿ ಹೆಚ್ಚಿನ ಸಮಯವನ್ನು ನಾನು ಮನೆಯಲ್ಲಿಯೇ ಕಳೆಯುತ್ತಲಿದ್ದೆನು. ನನ್ನ ಸಂಚಾರ, ತುಂಟತನಗಳು ನಿಂತು ಹೋಗಿದ್ದುವೆಂದು ಹೇಳಬಹುದು. ಸುಬ್ಬುವಾದರೂ ಆಗಾಗ ನಮ್ಮ ಮನೆಗೆ ಬರುತ್ತಲಿರುವನು; ಅತ್ತಿಗೆಗೆ ಅವನೆಂದರೆ ಹೆಚ್ಚು ಸಲಿಗೆ. ಅವಳನ್ನು ಅವನು "ಅಕ್ಕ" ಎಂದು ಸಂಬೋಧಿಸುತ್ತಲಿದ್ದನು. ಅವನಿಗೆ ಅತ್ತಿಗೆಯು ಹೇಗೆ ಅಕ್ಕನಾದಳೆಂಬುದನ್ನು ನಾನು ಬಲ್ಲವನಲ್ಲ. ನಮ್ಮ ಹೂದೋಟದಲ್ಲಿ ಅವನಿಗೂ ಒಂದು ಪ್ರತ್ಯೇಕ ಪಾತಿಯಿರುವುದು ಅದರಲ್ಲಿ ಅವನಿಗೆ ಇಷ್ಟವಾಗಿರುವ ಹೂವಿನ ಬೀಜವನ್ನು ಅವನು ಬಿತ್ತಿರುವನು. ಅದರಂತೆಯೇ ನನಗೂ ಅತ್ತಿಗೆಗೂ ಪ್ರತ್ಯೇಕ ಪ್ರತ್ಯೇಕ ಪಾತಿಗಳಿರುತ್ತವೆ.

ನಮ್ಮೊಳಗೆ ಒಂದು ಸಂಧವಿದ್ದಿತು; ಯಾರ ಪಾತಿಯಲ್ಲಿ ಮೊದಲು ಹೂವಾಗುವುದೋ, ಅವರಿಗೆ ಉಳಿದ ಇಬ್ಬರು ಎರಡಾಣೆಗಳ ಬೆಲೆಯ ಪೆಪ್ಪರುಮೆಂಟು ಕೊಡಬೇಕೆಂದು. ಪ್ರತಿದಿನವೂ ಬೆಳಗ್ಗೆ ಎದ್ದು ನಮ್ಮ ಪಾತಿಗಳಲ್ಲಿ ಹೂವಾಗಿದೆಯೋ? ಎಂಬುದನ್ನು ಅತ್ಯಾತುರದಿಂದ ನಾವು ನೋಡುತ್ತಲಿದ್ದೆವು. ಎಲ್ಲರಲ್ಲಿಯೂ ಹರ್ಷವು ತುಂಬಿ ತುಳುಕಾಡುತ್ತಲಿದ್ದಿತು. ನಿರುತ್ಸಾಹಭರಿತನಾಗಿ ಉದಾಸೀನಭಾವದಲ್ಲಿರುವ ನಮ್ಮ ಅಣ್ಣನಲ್ಲಿಯೂ, ಹರ್ಷ ಮತ್ತು ಉತ್ಸಾಹ ಇವುಗಳು ಮೊಳೆಯತೊಡಗಿದವು. ಹಲವು ಸಾರೆ ಸುಬ್ಬು, ಅತ್ತಿಗೆ ಮತ್ತು ನಾನು ಹೂದೋಟದಲ್ಲಿ ಕೆಲಸ ಮಾಡುತ್ತಿರುವಾಗ ಅವನೂ ಅಲ್ಲಿಗೆ ಬರುತ್ತಲಿದ್ದನು. ಅವನೂ ಚಿಕ್ಕ ಮಕ್ಕಳ ಹಾಗೆ ನಗುತ್ತಾ, ನಮ್ಮೊಡನೆ ಪಾತಿಗಳಲ್ಲಿರುವ ಕಳೆಗಳನ್ನು ಕೀಳುವುದರಲ್ಲಿಯೂ, ಹೂಗಿಡಗಳಿಗೆ ನೀರೆರೆಯುವುದರಲ್ಲಿಯೂ ಭಾಗವನ್ನು ವಹಿಸುತ್ತಲಿದ್ದನು.

ಒಂದು ದಿನ ಸಾಯಂಕಾಲ ನಾವೆಲ್ಲರೂ ಸೇರಿ ಹೂಗಿಡಗಳಿಗೆ ನೀರೆರೆಯುತ್ತಿದ್ದೆವು. ಕೆಲವು ಗುಲಾಬಿಯ ಗಿಡಗಳಲ್ಲಿ ಮೊಗ್ಗುಗಳು ಹೊರಬಿದ್ದಿದ್ದುವು. ಅವುಗಳು ಇನ್ನೊಂದೆರಡು ದಿನಗಳಲ್ಲಿಯೇ ಹೂವಾಗುವುವೆಂದು ನಮ್ಮೊಳಗೆ ನಾವೇ ಮಾತಾಡಿಕೊಳ್ಳುತ್ತಲಿದ್ದೆವು. ಸುಬ್ಬುವು:-"ಪ್ರೈಸು ಯಾರು ಹೊಡೆಯುತ್ತಾರೆ ಅಂತ ನೋಡಬೇಕು ಕಣೋ" ಎಂದು ನುಡಿದನು.

"ಯಾರಾದರೇನು? ನಮ್ಮಿಬ್ಬರಲ್ಲಿ ಒಬ್ಬನಿಗೆ" ಎಂದೆನು ನಾನು. ಅತ್ತಿಗೆಗೆ ಪ್ರೈಸು ಸಿಕ್ಕುವುದಿಲ್ಲವೆಂದು ನನಗೆ ಚೆನ್ನಾಗಿ ಗೊತ್ತಿದ್ದಿತು. ಆಕೆಯ ಪಾತಿಯಲ್ಲಿರುವ ಗಿಡಗಳಿಂದ ಇನ್ನೂ ಮೊಗ್ಗುಗಳು ಹೊರಬಿದ್ದಿರಲಿಲ್ಲ.

"ಸಾಕು ಸುಮ್ಮನಿರೋ, ನನ್ನ ಪಾತಿಯಲ್ಲಿ ಮೊಗ್ಗು ಆಗಿಲ್ಲಾಂತ ಇಷ್ಟು ಹಾಸ್ಯವೇಕೆ? ಹೋದರೆ ಎರಡಾಣೆ ಅಲ್ವೇ?' ಎಂದು ಅತ್ತಿಗೆಯು ಹೇಳಿದಳು.

ವಾಯುಸೇವನೆಗಾಗಿ ತೆರಳಿದ್ದ ನಮ್ಮ ಅಣ್ಣನು ಈ ಸಮಯದಲ್ಲಿ ಹಿಂದಿರುಗಿ ಮನೆಗೆ ಬಂದನು. ಅವನು ನಮ್ಮ ಮಾತುಗಳನ್ನು ಕೇಳಿದ ಹಾಗೆ ತೋರುತ್ತವೆ.

ಅವನು ಸುಬ್ಬುವಿನೊಡನೆ "ಏನು ಪ್ರೈಸ್ಸ ಅವೋ ಸುಬ್ಬು?" ಎಂದು ಪ್ರಶ್ನಿಸಿದನು.

"ಏನು ಇಲ್ಲಾ ಸಾರ್, ಯಾರ ಪ್ಲಾಟಿನಲ್ಲಿ ಮೊದಲು ಹೂಬಿಡುವುದೋ ಅವರಿಗೆ ಉಳಿದಿಬ್ಬರು ಎರಡಾಣೆಗಳ ಪೆಪ್ಪರುಮೆಂಟನ್ನು ಕೊಡಬೇಕೆಂದು ನಾವು ತೀರ್ಮಾನಿಸಿರುತ್ತೇವೆ." ಎಂದು ಸುಬ್ಬುವು ಜವಾಬು ನೀಡಿದನು.

"ಅಷ್ಟೇ ಏನು? ನೀವು ನಾನು ಹೇಳಿದ ಹಾಗೆ ನಡೆದು ಜೈಸಿದವರಿಗೆ First Prige ಎರಡು ರೂಪಾಯಿಗಳನ್ನು ಕೊಡುತ್ತೇನೆ."

"ಏನಣ್ಣಾ ಅದು?"

"ನಮ್ಮ ಹಿತ್ತಲಿನಲ್ಲಿ ಒಬ್ಬೊಬ್ಬರು ಒಂದೊಂದು ಪ್ಲಾಟಿನಲ್ಲಿ ಕಾಯಿಪಲ್ಯಗಳನ್ನು ಬೆಳೆಯಿಸಬೇಕು. ಯಾರ ಪ್ಲಾಟಿನಲ್ಲಿ ಹೆಚ್ಚಿಗೆ ಕಾಯಿಪಲ್ಯಗಳು ಬೆಳೆಯುವುವೋ, ಅವರಿಗೆ ಎರಡು ರೂಪಾಯಿಗಳ ಇನಾಮನ್ನು ನಾನು ಕೊಡುವೆನು."

ಅಣ್ಣಾನ ಈ ಸಮಸ್ಯೆಗೆ ನಾವಿಬ್ಬರೂ ತಲೆದೂಗಿದೆವು; ಅತ್ತಿಗೆಯು ಮಾತ್ರ ಮಾತಾಡಲಿಲ್ಲ. ನಮ್ಮ ಸಂಭಾಷಣೆಯನ್ನು ಅವಳು ಮೌನದಿಂದ ಕೇಳುತ್ತಲಿದ್ದಳು ಅಣ್ಣಾನ ಸಲಹೆಯು ನಮಗೆ ಸಮಂಜಸವಾಗಿ ತೋರಿ ಬಂದಿತು.

"ಸರಿ, ನಾಳೆಯೇ ಪ್ರಾರಂಭಿಸೋಣ. ಅಲ್ಲವೇನೋ ಸುಬ್ಬು?" ಎಂದು ನಾನು ನನ್ನ ಗೆಳೆಯನನ್ನು ಪ್ರಶ್ನಿಸಿದೆನು. ಅವನು "ಹಾಗೆಯೇ ಆಗಲಿ ಶೀನು!" ಎಂದು ಒಪ್ಪಿದನು.

ಮರುದಿನ ಶಾಲೆಯಿಂದ ಬಂದು ಕಾಫಿಯನ್ನು ಕುಡಿದ ನಂತರ ಕೈಯಲ್ಲಿ ಒಂದು ಗುದ್ದಲಿಯನ್ನು ಹಿಡಿದು ಕೊಂಡು ಹೊರಟೆನು ನಾನು ಹಿತ್ತಲಿಗೆ ತಲುಪುವ ಮುಂಚೆಯೇ ಸುಬ್ಬುವು ಕೈಯಲ್ಲಿ ಗುದ್ದಲಿಯನ್ನು ಹಿಡಿದುಕೊಂಡು ನನ್ನನ್ನು ಕಾದು ಅಲ್ಲಿ ನಿಂತಿದ್ದನು. ಅತ್ತಿಗೆಯು ನನ್ನನ್ನು ಹಿಂಬಾಲಿಸಿದಳು. ನಾನು ೧೨ ಅಡಿ ಉದ್ದ ೧೦ ಅಡಿ ಅಗಲದ ಚತುರ್ಭುಜ ಆಕಾರವನ್ನು ಮಾಡಿ ಅಗೆಯಲು ಪ್ರಾರಂಭಿಸಿದೆನು ಆ ಸ್ಥಳವು ಕಲ್ಲು ಮತ್ತು ಬೇರುಗಳಿಂದ ತುಂಬಿದ್ದುದರಿಂದ ಅಗೆಯುವುದೆಂದರೆ, ನನಗೆ ಸಾಕು ಸಾಕಾಗಿ ಹೋಯಿತು ನನ್ನ ಮೈ ಬೆವರಿತು ನನ್ನ ಅತ್ತಿಗೆಯು ನಾನು ಅಗೆದು ಹಾಕಿದ ಮಣ್ಣಿನ ಹೆಂಟೆಗಳನ್ನು ಒಂದು ಮರದ ದೊಣ್ಣೆಯನ್ನು ಕೈಯಲ್ಲಿ ಹಿಡಿದು, ಅದರಿಂದ ಹೊಡೆದು ಅವುಗಳನ್ನು ಹುಡಿಮಾಡುತ್ತಲಿದ್ದಳಲ್ಲದೆ, ಮಣ್ಣಿನಲ್ಲಿ ಬೆರೆತಿರುವ ಕಲ್ಲು ಮುಳ್ಳುಗಳನ್ನು ಆರಿಸಿ ತೆಗೆದು ಹಾಕುತ್ತಲಿದ್ದಳು.

ಅವಳು "ಶೀನೂ ಬಹಳ ಆಯಾಸವಾಗುತ್ತಲಿದ್ದರೆ ಈ ಮರದ ನೆರಳಿನಲ್ಲಿ ಕುಳಿತುಕೊಂಡು ನಿನ್ನ ಆಯಾಸವನ್ನು ಪರಿಹರಿಸಿಕೊ" ಎಂದು ನುಡಿದಳು. ನಾನು ನಿಜವಾಗಿಯೂ ಬಹಳ ಬಳಲಿದ್ದೆನು. ಅವಳ ವಚನದಂತೆ ನಮ್ಮ ಮನೆಯ ಹಿತ್ತಲಿನಲ್ಲಿರುವ ಹಲಸಿನ ಮರದ ನೆರಳಿನಲ್ಲಿ ಆಶ್ರಯವನ್ನು ಹೊಂದಿ ನನ್ನ ಆಯಾಸವನ್ನು ಪರಿಹರಿಸಿಕೊಂಡೆನು.

ಆದರೆ ಸುಬ್ಬುವು ಅಷ್ಟು ಬೇಗನೆ ಬಳಲಲಿಲ್ಲ; ಅವನು ತನ್ನ ಪಾತಿಯನ್ನು ಹುಷಾರಾಗಿ ಅಗೆಯುತ್ತಲಿದ್ದನು. ಅವನದು ನನಗಿಂತ ಸ್ವಲ್ಪ ಬಲಿಷ್ಟವಾದ ದೇಹವಾಗಿದೆ. ಆದುದರಿಂದ ಹೆಚ್ಚು ಹೊತ್ತಿನ ದೇಹದಂಡನೆಯನ್ನು ಅವನು ಸಹಿಸಬಲ್ಲನು. ಅವನು ಆ ದಿನವೇ ತನ್ನ ಪಾತಿಯನ್ನು ಅಗೆದು ಪೂರೈಸಿದನು; ಅಲ್ಲದೆ ನಾಲ್ಕು ಭಾಗಗಳಲ್ಲಿಯೂ ಅಗೆದು ಓಣಿಯನ್ನು ಮಾಡಿದನು.

ನಾನು ನನ್ನ ಪಾತಿಯಲ್ಲಿ ಅರ್ಧವನ್ನೂ ಸಹ ಅಗೆದು ಪೂರೈಸಿರಲಿಲ್ಲ. ಅದಲ್ಲದೆ ಅತ್ತಿಗೆಗೆ ಬೇರೊಂದು ಪಾತಿಯನ್ನು ನಾನೇ ಅಗೆದುಕೊಡಬೇಕಾಗಿದೆ. ಆದುದರಿಂದ ನಾನು ಹೆಚ್ಚು ಹೊತ್ತು ನೆರಳಿನಲ್ಲಿ ಕುಳಿತುಕೊಳ್ಳದೆ, ಪುನಃ ಪ್ರಯತ್ನಿಸಲು ಪ್ರಾರಂಭಿಸಿದೆನು. ದುಡಿಯಲು ನನಗೆ ಬೇಸರವಿಲ್ಲ; ಅದು ಅತ್ಯಂತ ವಿನೋದವಾದ ಒಂದು ಕೆಲಸವೆಂದು ನಾನು ಈಗಲೂ ಭಾವಿಸುತ್ತಲಿರುವೆನು.

ನೇರವೇ ಸಂಧ್ಯೆಯಾಗುತ್ತ ಬಂದಿತು; ಆ ದಿನದ ಕೆಲಸವನ್ನು ನಾವು ನಿಲ್ಲಿಸಿದೆವು ನನ್ನ ಉದರದಲ್ಲಿ ಕ್ಷುಧಾರಾಕ್ಷಸನು ಗರ್ಜನೆ ಮಾಡಲು ಪ್ರಾರಂಭಿಸಿದ್ದನು. ನಾನು ಅತ್ತಿಗೆಯೊಡನೆ ಈ ಪ್ರಕಾರ ನುಡಿದೆನು:

"ಅತ್ತಿಗೆ, ನನಗೆ ಹಸಿವೆಯಾಗುತ್ತದೆ; ಮನೆಯಲ್ಲಿ ಅವಲಕ್ಕಿ ಇಲ್ಲವೆ?"

"ಒಳಗೆ ಹೋಗಿ ನೋಡುವೆನು" ಎಂದು ಅವಳು ಮನೆಯೊಳಗೆ ಹೊರಟು ಹೋದಳು.

ಐದು ನಿಮಿಷಗಳು ಕಳೆಯುವದರೊಳಗಾಗಿ ಒಂದು ತಟ್ಟೆಯಲ್ಲಿ ಅವಲಕ್ಕಿ, ಬಾಳೇ ಹಣ್ಣುಗಳು, ಎರಡು ಮೂರು ತೆಂಗಿನಕಾಯಿ ಚೂರುಗಳು ಇವುಗಳನ್ನು ತೆಗೆದುಕೊಂಡು ಅವಳು ಹೊರಗೆ ಬಂದಳು ನಾವು ಮೂವರೂ ತುಳಸೀಕಟ್ಟೆಯ ಬಳಿಯಲ್ಲಿ ಕುಳಿತು ವಿನೋದದ ಮಾತುಗಳನ್ನಾಡುತ್ತ ಅವಲಕ್ಕಿ-ಬಾಳೇಹಣ್ಣುಗಳನ್ನು ತಿಂದೆವು

ಪ್ರಶಾಂತವಾದ ಸಮಯ ತಲೆಯನ್ನು ಬದುಕೆಂಬ ಭಾರವು ಒತ್ತಲಿರುವ ಕಾಲವು. ನಾಳೆಯ ದಿನದ ಚಿಂತೆಯಿಲ್ಲ, ಆನಂದತಲ್ಲೀನನಾಗಿ, ವಿನೋದದಿಂದ ಕಾಲ ಕಳೆದ ಆ ದಿನವನ್ನು ನಾನು ಎಂದಿಗೂ ಮರೆಯಲಾರೆನು ಆ ಕಾಲದಲ್ಲಿ ಅಣ್ಣನಂತೆ ನಾನು ದೊಡ್ಡವನಾಗಬೇಕೆಂಬ ಹಂಬಲವಿದ್ದಿತು; ಆದರೆ ಈಗ ದೊಡ್ಡವನಾಗಿರುವೆನು. ನನ್ನ ಬುದ್ಧಿಯೂ ವಿಕಾಸವನ್ನು ಪಡೆದಿದೆ. ಕಾಸುಗಳನ್ನು ಸಂಪಾದಿಸಲು ನಾನು ಸಮರ್ಥನಾಗಿರುವೆನು, ಆದರೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ. ಚಿಂತೆಗಳು ನನ್ನ ಮೆದುಳನ್ನು ವ್ಯಾಪಿಸಿ, ಅದನ್ನು ತಿನ್ನುತ್ತಲಿರುವವು. ಮನೆಯ ಚಿಂತೆ, ಮಕ್ಕಳ ಚಿಂತೆ, ಮಡದಿಯ ಚಿಂತೆ, ಇಂದಿನ ಚಿಂತೆ, ನಾಳೆಯ ಚಿಂತೆ ಎಂಬೀ ಚಿಂತೆಗಳ ಭಾರದಿಂದ ನನ್ನ ಶಿರವು ಬೊಗ್ಗಿ ಹೋಗಿರುವದು.

ಇಂದ್ರದಿಕ್ಕಿನಲ್ಲಿ ಸುಧಾಕರನು ಇಂಪಾಗಿ ನಗುವ ತನ್ನ ವದನ ಮಂಡಲವನ್ನು ನಮಗೆ ತೋರಿಸಿದನು. ಅತ್ತಿಗೆಯು ತುಲಸಿಗೆ ದೀಪವನ್ನು ಮಡುಗಿದಳು. ನಾನೂ

ಸುಬ್ಬನೂ ಆಹ್ಲಾದಭರಿತರಾಗಿ ಹರಟೆಯನ್ನು ಹೊಡೆಯುತ್ತಲಿದ್ದೆವು. ನಮ್ಮ ಆಗಲಿನ ಮನಸ್ಸುಗಳು ಗಾಳಿಗಿಂತಲೂ ಹಗುರವಾಗಿದ್ದುವು; ಆಕಾಶದಲ್ಲಿ ಹಾರಾಡುತ್ತಿರುವ ಪಕ್ಷಿಗಳಂತೆ ಸ್ವತಂತ್ರವಾಗಿದ್ದುವು; ಆದರೆ ಈಗ ಸಂಸಾರವು-ಕುಟುಂಬ ಭಾರವು ನಮ್ಮನ್ನು ಬಂಧನಸ್ಥರನ್ನಾಗಿ ಮಾಡಿರುವುದು.

ಹೌದು. ಅಂಬಿಕಾತನಯ ದತ್ತರು ಹಾಡಿದಂತೆ ಬಾಲ್ಯವೇ ನಮ್ಮ ಜೀವನದಲ್ಲಿ ವಸಂತಕಾಲವಾಗಿದೆ. ಅದು ಕಳೆದ ನಂತರ ಹಿಂದಿರುಗಿ ನಮಗೆ ಸಿಗುವಂತಿಲ್ಲ. ನಮ್ಮ ಮನಸ್ಸಿನಲ್ಲಿ ನಾವೆಷ್ಟು ಕೊರಗಿದರೇನು ಪ್ರಯೋಜನವು?

---

[ ೭ ]

'ಉದ್ಯಮವು ಮನುಷ್ಯನನ್ನು ಚಿಂತೆಯಿಂದ ಪಾರುಮಾಡಿ, ಅವನ ಜೀವನದಲ್ಲಿ ನವೋನ್ಮೇಷವು ಸಂಜಾತವಾಗುವಂತೆ ಮಾಡುತ್ತದೆ' ಎಂಬ ಬಲ್ಲವರ ವಚನವು ಅಕ್ಷರಶಃ ವಾಸ್ತವವಾಗಿದೆ, ಎಂದು ನಾನು ನುಡಿಯಬಲ್ಲೆನು; ಆದರೆ ಆ ದುಡಿತವು ಹಂಗಿನದಾಗಿರಬಾರದು; ಸ್ವತಂತ್ರವಾದ ಪ್ರಯತ್ನಗಳದಿರಬೇಕು. ಹಾಗಾದರೇನೇ ಮನುಷ್ಯನಿಗೆ ಅದರ ಸವಿಯನ್ನರಿಯಲು ಸಾಧ್ಯವಾಗುತ್ತದೆ. ಅನ್ಯರಿಗಾಗಿ-ಕೇವಲ ಉದರಂಭರಣಕ್ಕಾಗಿ-ಇನ್ನೊಬ್ಬರಿಗೆ ದಾಸನು ತಾನಾಗಿ-ದುಡಿಯುತ್ತಿರುವದು ಒಂದು ಕತ್ತೆಯ ದುಡಿತಕ್ಕಿಂತಲೂ ಮಿಗಿಲಾದ ಉದ್ಯಮವಾಗಿರುವದಿಲ್ಲ. ಆ ರೀತಿ ದುಡಿಯುವ ಮನುಷ್ಯನು ಎರಡು ಕಾಲಿನ ಮೃಗವಾಗಿರುತ್ತಾನೆ. ಅವನ ಬುದ್ಧಿ, ಚಿಂತನೆ ಮತ್ತು ಉದ್ಯಮಗಳು ಒಂದು ಸ್ವತಂತ್ರದಾರಿಯನ್ನು ಅವಲಂಬಿಸಲು ಶಕ್ತಿಯುಳ್ಳವುಗಳಾಗಿರುವದಿಲ್ಲ. ಆ ಬಾಳು ಅವನನ್ನು ಉನ್ನತಿಗೇರಿಸುವದರ ಬದಲು, ಅಧಃಪತನಕ್ಕೆ ಎಳೆದೊಯ್ಯುವುದು.

ಆದರೆ ಸ್ವತಂತ್ರವಾದ, ಸ್ವವಿಚಾರಗಳಿಗನುಸಾರವಾಗಿರುವ ಉದ್ಯಮವು ನಿಜವಾಗಿಯೂ ಆನಂದದಾಯಕವಾಗಿದೆ. ಅವನು ಕಲಾಭಿಜ್ಞನಾಗಿದ್ದರೆ ಜೀವನದ ಸವಿಯನ್ನು ಅವನು ನೂರುಮಡಿ ಸವಿಯಬಲ್ಲನು. ಲೋಕವು ನಿಸ್ಸಾರವೆಂದು ಗ್ರಹಿಸುವ ಕಾರ್ಯಗಳಲ್ಲಿ ಅವನು ಸತ್ವವನ್ನು ಕಾಣಬಲ್ಲನು.

ಇಷ್ಟೆಲ್ಲ ನಾನು ನುಡಿಯುತ್ತಿರುವುದು ನಾವು ರಚಿಸಿದ ಹೂದೋಟ, ಕಾಯಿ-ಪಲ್ಯದ ತೋಟ ಇವುಗಳು ಅತ್ಯಂತ ನಿಸ್ಸಾರವಾದವುಗಳೆಂದು ಪ್ರಥಮ ದೃಷ್ಟಿಯಲ್ಲಿ ತೋರಿಬಂದರೂ, ಅವು ನಮ್ಮ ಜೀವನದಲ್ಲಿ ಅತ್ಯಂತ ಮಹತ್ವವಾದ ಎರಡು ಕೃತ್ಯಗಳಾಗಿ ಪರಿಣಮಿಸಿ, ನನ್ನ ಬಾಳಿನ ಅಡಿಗಲ್ಲುಗಳಾಗಿ ನಿಂತುವೆಂಬುದನ್ನು ವ್ಯಕ್ತಪಡಿಸುವದಕ್ಕೆ ಮಾತ್ರವಾಗಿವೆ. ನನ್ನ ಈ ಶಾರೀರಿಕ ಉದ್ಯಮಗಳಿಂದ ನನ್ನಲ್ಲಿ ಮೊಳೆತಿದ್ದ ಆಲಸ್ಯತೆ, ತುಂಟತನಗಳು ಮಾಯವಾಗಲು ಪ್ರಾರಂಭಿಸಿದವು. ಶರೀರಕ್ಕೆ ಸುಖವಾದ ವ್ಯಾಯಾಮವು ಸಿಗುತ್ತಲಿದ್ದುದರಿಂದ ರಾತ್ರಿಕಾಲ ಸುಖನಿದ್ರೆಯು ಲಭಿಸುತಿದ್ದುದಲ್ಲದೆ, ಇರುಳನ್ನು ಸ್ವಪ್ನಸಾಮ್ರಾಜ್ಯವಿಹಾರಗಳಲ್ಲಿ ಕಳೆಯಬೇಕಾಗಿ ಬರು

ತ್ತಿರಲಿಲ್ಲ. ಮನಸ್ಸು ಹಳೆತು-ಕೊಳೆತ ವಿಚಾರಗಳ ಬಚ್ಚಲುಮನೆಯಾಗುವ ಪ್ರಸಂಗವು ನಿಂತುಹೋಯಿತು.

ನಮ್ಮ ಹೂಗಿಡಗಳು ಪುಷ್ಪಗಳನ್ನು ಬೀರತೊಡಗಿದವು. ನಾನು, ನನ್ನ ಅತ್ತಿಗೆ ಮತ್ತು ಸುಬ್ಬು ಆ ಹಳೇ ಹಲಸಿನಮರದ ನೆರಳಲ್ಲಿ ಕುಳಿತು ನಮ್ಮ ಪ್ರಯತ್ನಗಳ ಫಲವಾಗಿ ಬೆಳೆದು ಪುಷ್ಪವತಿಯಾಗಿ ಬೆಳಗುತ್ತ, ನಮ್ಮ ದರ್ಶನೇಂದ್ರಿಯಗಳಿಗೆ ಹಬ್ಬದೂಟವನ್ನು ಮಾಡಿಸುತ್ತಿರುವ ನಮ್ಮ ಆ ಪುಟ್ಟ ಹೂದೋಟದ ಸೊಬಗನ್ನು ಸಂಧ್ಯಾಕಾಲದಲ್ಲಿ ನಾವು ಆನಂದದಿಂದ ಈಕ್ಷಿಸುತ್ತಿದ್ದೆವು. ವಿವಿಧ ಬಣ್ಣಗಳನ್ನು ತಳೆದು ಚಿಕ್ಕಮಕ್ಕಳ ನಗುವಿನಂತೆ ಶೋಭಿಸುತ್ತಲಿರುವ ಆ ಹೂಗಳ ಮೇಲೆ ಸಂಧ್ಯಾ ಸಮೀರನ ಬಿಸಿಲು ಬೀಳುವಾಗ ಅವು ಎಷ್ಟು ಲಾವಣ್ಯವನ್ನು ಬೀರುತ್ತಲಿವೆ ಎಂಬುದನ್ನು ವರ್ಣಿಸಲು ನಾನು ಶಕ್ತನಲ್ಲ. ಯೋಗ್ಯವಾದ ನುಡಿಗಳು ನನಗೆ ಹೊಳೆಯವು. ಸವಿಗಂಪನ್ನು ಸೂಸುತ್ತಿರುವ ಮಲ್ಲಿಗೆ-ಅರುಣವರ್ಣದ ಗುಲಾಬಿ-ಚಿನ್ನದಂತೆ ಬೆಳಗುತ್ತಲಿರುವ ಶಾವಂತಿಗೆ-ಈ ಹೂಗಳ ಸೊಬಗನ್ನು ನೋಡಿ ಆನಂದದಲ್ಲಿ ನಾನು ತಲ್ಲೀನನಾಗಿ ಹೋಗುತ್ತಲಿದ್ದೆನು. ಬಾಲಕನಾದ ನನ್ನ ಮನಸ್ಸಿಗೆ ಸೌಂದರ್ಯವೇನೆಂಬುದರ ಕಲ್ಪನೆಯನ್ನು ಅವು ಮಾಡಿಕೊಟ್ಟವು.

ಅತ್ತಿಗೆಯು ತೋಟದಲ್ಲಿ ಅತ್ಯಂತ ಸುಂದರವಾಗಿ ಬೆಳಗುತ್ತಲಿದ್ದ ಗುಲಾಬಿ ಹೂಗಳಲ್ಲಿ ಒಂದನ್ನು ಕಿತ್ತು ತನ್ನಾ ಜಡೆಯಲ್ಲಿ ಮುಡಿದುಕೊಂಡಳು ಆ ಹೂವು ಅತ್ತಿಗೆಯ ಸೌಂದರ್ಯವನ್ನು ಹೆಚ್ಚಿಸಿತು. ಗಿಡಗಳ ಮಧ್ಯದಲ್ಲಿ ಸಂಚರಿಸುತ್ತಲಿರುವ ಅವಳ ಆಗಲಿನ ರೂಪವು ೀ ಳು ಒಬ್ಬ ದೇವಿಯಂತೆ ತೋರುತ್ತಲಿದ್ದಿತು. ನಿಜವಾಗಿಯೂ ಆಕೆಯು ಒಬ್ಬ ದೇವಿಯೇ ಆಗಿರುವಳು. ಅವಳ ನಿರ್ದೇಶದಂತೆಯಲ್ಲವೆ ನಾನೂ ಸುಬ್ಬುವೂ ಉಪವನವನ್ನು ರಚಿಸಲು ಹೊರಟುದುದು? ಆದರೆ ಅವಳು ಪೂರ್ಣ ವಿಕಾಸವನ್ನು ಹೊಂದಿ ಸೌಂದರ್ಯದ ಸಂದೇಶವನ್ನು ಬೀರುತ್ತಲಿರುವ ಆ ಗುಲಾಬೀ ಹೂವನ್ನು ಕಿತ್ತು ಮುಡಿದುಕೊಂಡದ್ದು ನನ್ನ ಮನಸ್ಸಿಗೆ ಸರಿದೋರಲಿಲ್ಲ. ವಿಕಾಸವನ್ನು ಹೊಂದಿದ ಆ ಸುಮವು ಕೆಲವು ದಿನಗಳ ವರೆಗೆ ಅಂದವಾಗಿ ಕಂಗೊಳಿಸುತ್ತ ಬಾಡಿ ಹೋಗಲಿ! ನಾವೇಕೆ ಗಿಡದಿಂದ ಕಿತ್ತು ಅದನ್ನು ನಮ್ಮ ಸುಖಕ್ಕೆ ಬಲಿಯಾಗಿ ಕೊಡಬೇಕು? ಇದು ಹೃದಯದಲ್ಲಿರುವ ಕಠಿಣತೆಯು ಪ್ರಕಾಶನವೆಂದಾಗಿದೆ ಎಂದು ನನ್ನ ವಿಚಾರವು! ತನ್ನ ಕೇವಲ ಸುಖದ ಹಂಬಲಕ್ಕಾಗಿ ಸುಂದರವಾದ ಒಂದು ಸಾಧನವನ್ನು ಮಾನವನು ನಶಿಸುವದನ್ನು ಕಲಾಭಿಜ್ಞರು ಎಂದಿಗೂ ಒಪ್ಪಲಾರರು.

ಗುಲಾಬೀ ಹೂವೊಂದನ್ನು ಅತ್ತಿಗೆಯು ಕಿತ್ತು ಮುಡಿದುಕೊಂಡ ಆ ಚಿತ್ರವು ಒಂದು ತೀಕ್ಷ್ಣವಾದ ಮುಳ್ಳು ಚುಚ್ಚಿದುದಕ್ಕಿಂತಲೂ ಹೆಚ್ಚಿನ ವೇದನೆಯನ್ನು ನನ್ನದೆಯಲ್ಲಿ ಉಂಟು ಮಾಡಿತು. ನಾನು ಕುಗ್ಗಿದ ಧ್ವನಿಯಲ್ಲಿ "ಅತ್ತಿಗೆ"ಎಂದು ಕೂಗಿದೆನು.

ನನ್ನಲ್ಲಿ ಹಠಾತ್ತಾಗಿ ಕಾಣ ಬಂದ ಶೋಕರಸವನ್ನು ನೋಡಿ ಅತ್ತಿಗೆಯು

ಚಕಿತಳಾಗಿ, "ಏನೋ ಶೀನು?" ಎಂದು ನಗುತ್ತ, ಆಕಾಶದಲ್ಲಿ ಹಾರಾಡುತ್ತಿರುವ ಹಕ್ಕಿಗಳಿಗಿಂತಲೂ ಹಗುರವಾದ ಚಿತ್ತಭರಿತಳಾಗಿ ಪ್ರಶ್ನಿಸಿದಳು. ಸುಬ್ಬುವು ನನ್ನಲ್ಲಿ ಯಾವುದೋ ಒಂದು ಹೊಸ ತರದ ಕಾಹಿಲೆಯನ್ನು ಕಂಡವನ ಹಾಗೆ ನನ್ನನ್ನು ಮರಮರನೇ ನೋಡತೊಡಗಿದನು.

"ಅತ್ತಿಗೆ, ನೀನೇಕೆ ಆ ಹೂವನ್ನು-ಆ ದೊಡ್ಡ ಗುಲಾಬಿಯ ಹೂವನ್ನು ಕಿತ್ತೆ? ಅದು ಗಿಡದಲ್ಲಿ ಅರಳಿ ನಿಂತಿರುತ್ತಿದ್ದರೆ ಏನು ಪ್ರಮಾದವಾಗುತ್ತಲಿದ್ದಿತು?" ಎಂದು ಉಕ್ಕಿಬರುತ್ತಿರುವ ವ್ಯಸನವನ್ನು ಸಹಿಸಲಾರದೆ ನಾನು ಪ್ರಶ್ನಿಸಿದೆನು.

"ಅದೇಕೆ ಶೀನೂ? ಹೂವೊಂದನ್ನು ಬಿಡಿಸಿ ಜಡೆಯಲ್ಲಿ ಮುಡಿದುಕೊಳ್ಳ ಬಾರದೇನು?"

"ಆ ಹೂವು ಗಿಡದಲ್ಲಿರುತ್ತಲಿದ್ದರೆ ಆ ರೂಪು, ಆ ಚಲುವು ನಮ್ಮೆಲ್ಲರ ಕಣ್ಣು ಗಳಿಗೆ ಆನಂದವನ್ನುಂಟು ಮಾಡುತ್ತಲಿದ್ದಿತು ಈಗ ನೀನೊಬ್ಬಳೇ ಆ ಸುಖವನ್ನು ಅನುಭವಿಸುತ್ತಲಿರುವೆ! ಕ್ಷಣ ನೇರದಲ್ಲಿಯೇ ಆ ಹೂವು ಬಾಡಿ ಮಣ್ಣುಪಾಲಾಗಿ ಹೋಗುವುದು"

"ಇಲ್ಲದಿದ್ದರೆ ಅದು ಬಾಡುವುದಿಲ್ಲವೇ? ಅದನ್ನು ನಾನು ಮುಡಿದುಕೊಂಡುದ ರಿಂದಾಗುವ ನಷ್ಟವೇನು? ಆ ಹೂವನ್ನು ನಾನು ಧರಿಸುವಾಗ ಉಂಟಾಗುವ ಆನಂದ ವನ್ನು ನಾನೇಕೆ ಅನುಭವಿಸಕೂಡದು?"

ಈ ಪ್ರಶ್ನೆಗೆ ಸರಿಯಾದ ಸಮಾಧಾನವನ್ನು ನೀಡಲು ನನ್ನ ಹುಡುಗ ಬುದ್ಧಿಗೆ ತೋಚಲಿಲ್ಲ. ಒಂದು ಹೂವನ್ನು ಗಿಡದಿಂದ ಕಿತ್ತು ಆಘ್ರಾಣಿಸಿಯೋ ಅದರಿಂದ ದೇಹವನ್ನಲಂಕರಿಸಿಯೋ ಹಾಳು ಮಾಡುವುದರ ಬದಲು, ಗಿಡದಲ್ಲಿಯೇ ಅದು ಬಾಡಿ ಹೋಗುವುದನ್ನು ನೋಡುವದು ನನಗೆ ಹೆಚ್ಚು ಇಷ್ಟವಾಗಿದ್ದಿತು; ಆದರೆ ಈ ಅಭಿಪ್ರಾಯವು ಅತ್ತಿಗೆಗೆ ರುಚಿಸಲಿಲ್ಲ ಅವಳು ಅದನ್ನು ಕಿತ್ತು ಉಪಯೋಗಿ ಸುವುದು ಸುಖಕರವೆಂದು ಬಗೆದಿದ್ದಳು. ನನ್ನ ಮಾತುಗಳನ್ನು ನ್ಯಾಯೀಕರಿಸಲು ಆವಶ್ಯವಿರುವ ಕಾರಣಗಳೂ ನನಗೆ ತೋಚಲಿಲ್ಲ ಒಂದು ಮಾತಿನಲ್ಲಿ ಹೇಳುವ ದಾದರೆ, ನನ್ನ ಸ್ಥಿತಿಯು ಕೆಸರಿನಲ್ಲಿ ಬಿದ್ದ ಕರುವಿನಂತಾಯಿತೆಂದು ಹೇಳಬಹುದು

"ಏನು, ಮಹಾನುನಿಯಂತೆ ವಿಚಾರಮಗ್ನನಾಗಿರುವೆ?" ಎಂದನು ಸುಬ್ಬು.

"ಹೌದು. ಈ ಯತಿವರ್ಯನು ಗಿಡದಿಂದ ಹೂಬಿಡಿಸುವುದು ಪಾಪದಾಯಕ ವೆಂದು ಹೊಸ ತತ್ವವನ್ನು ಕುರಿತು ಚಿಂತಾಮಗ್ನನಾಗಿರುವನು. ಸ್ವಾಮೀ ಮಹರ್ಷಿ ಗಳೇ! ತಿಳಿಯದೆ ತಪ್ಪು ಮಾಡಿದೆನು, ಕೋಪಭರಿತರಾಗಿ ನನ್ನನ್ನು ಶಪಿಸಬಾರದು!" ಎಂದು ನಗುತ್ತ, ಅತ್ತಿಗೆಯು ನನ್ನ ಕಾಲುಗಳ ಬಳಿಯಲ್ಲಿ ಕುಳಿತು ಎರಡೂ ಕೈಗಳನ್ನು ಮುಗಿದು ನಮಸ್ಕಾರ ಮಾಡಿದಳು. ಸುಬ್ಬುವು ತನ್ನ ಹೊಟ್ಟೆಯು ಹರಿದು ಹೋಗು ವಂತೆ ಗಟ್ಟಿಯಾಗಿ ನಕ್ಕನು.

ಆದರೆ ಅವರ ಈ ವಿನೋದಗಳು ನನ್ನನ್ನು ಕೆಳಗಿನ ವಲಯಕ್ಕೆ ಇಳಿಸಲು

ಪರ್ಯಾಪ್ತವಾಗಲಿಲ್ಲ. ಒಂದು ನಿಸ್ಸಾರವಾದ ಹೂವನ್ನು-ಕೆಲವು ನಿಮಿಷಗಳಲ್ಲಿಯೇ ಬಾಡಿ ಹೋಗತಕ್ಕ ಒಂದು ಕುಸುಮವನ್ನು-ಕುರಿತು ನನ್ನ ಮನಸ್ಸು ವಿಚಾರಮಗ್ನ ವಾಗಿದ್ದಿತು. ನಾನು ಮೊದಲಿನ ಹಾಗೆಯೇ ಗೌರವ ಸ್ವರದಲ್ಲಿ "ಅತ್ತಿಗೇ" ಎಂದೆನು.

"ಏನು, ನನ್ನ ಕಂದಾ!" ಎಂದಳವಳು.

"ನೀನು ಆ ಗುಲಾಬಿ ಹೂವನ್ನು ಕೀಳಬಾರದಿತ್ತು!"

"ಅದೇಕೆ ಶೀನು?"

"ಕಾರಣವನ್ನು ವಿವರಿಸಲು ನಾನು ಶಕ್ತನಲ್ಲ; ಹೂವನ್ನು ಗಿಡದಿಂದ ಕೀಳುವು ದನ್ನು ನೋಡುವಾಗ ನನಗೆ ಅತ್ಯಂತ ಸಂಕಟವಾಗುವುದು." ಎಂದು ನುಡಿದು ನಾನು ಅಳಲು ಪ್ರಾರಂಭಿಸಿದೆನು.

ಅವಳಿಗಾದರೂ ವ್ಯಸನವಾಗದೆ ಇರಲಿಲ್ಲ; "ಕಂದಾ ಅಳದಿರು," ಎಂದು ಹೇಳುತ್ತಾ, ತನ್ನ ಸೀರೆಯ ಸೆರಗಿನಿಂದ ನನ್ನ ಕಣ್ಣುಗಳಿಂದ ಪ್ರವಹಿಸುತ್ತಲಿದ್ದ ಬಾಷ್ಪಬಿಂದುಗಳನ್ನು ಒರಸಿದಳು. ಅವಳ ಮೋರೆಯನ್ನು ನೋಡಿದ ನನಗೆ ಅವಳು ನನಗಿಂತ ಹೆಚ್ಚು ದುಃಖವನ್ನು ಅನುಭವಿಸುತ್ತಲಿರುವಳೆಂಬುದು ವ್ಯಕ್ತವಾಯಿತು. ನಾನು ಆ ವದನ ಮಂಡಲವನ್ನೇ ಅವಲೋಕಿಸುತ್ತ ನಿಂತೆನು.

ಆ ದಿನಗಳಲ್ಲಿ, ನನ್ನ ಅತ್ತಿಗೆಯ ಹೃದಯವು ಇಷ್ಟು ಮೃದುವಾಹುದೆಂಬುದು ನನಗೆ ತಿಳಿದಿರಲಿಲ್ಲ; ಅಥವಾ ಅದನ್ನು ತಿಳಿಯಲು ನನ್ನ ಬುದ್ಧಿಯು ಪ್ರಯತ್ನಿಸಿರ ಲಿಲ್ಲ. ಅವಳ ಕಣ್ಣುಗಳಲ್ಲಿ ಪ್ರೇಮವು, ನಿಷ್ಕಲಂಕವಾದ ಸ್ನೇಹವು ಉಕ್ಕಿ ಪ್ರವಹಿ ಸುತ್ತಲಿದ್ದಿತು.

ನಾನು ದೂರ ಸರಿದು ನಿಂತೆನು; ಅತ್ತಿಗೆಯು: "ಮಗೂ, ನಿನ್ನ ಮನಸ್ಸಿಗೆ ನೋವಾಗುವುದಾದರೆ ಇನ್ನು ನಾನು ಹೂಗಳನ್ನು ಕೀಳುವುದಿಲ್ಲ." ಎಂದು ನುಡಿದಳು.

ಇಷ್ಟರಲ್ಲಿ ವಾಕಿಂಗ್ ಹೋಗಿದ್ದ ಸರ್ವಣ್ಣನು ಮನೆಗೆ ಹಿಂದಿರುಗಿ ಬಂದನು. ಅವನು ಅತ್ತಿಗೆಯನ್ನು ನೋಡುತ್ತಾ, "ಏನೆ ನೀ ವಸಂತಕಾಲದ ದೇವತೆಯೆ? ಇವ ರೆಲ್ಲರು ನಿನ್ನರ್ಚಕರೇ? ಭಕ್ತರಿಗೆ ಅದಾವ ವರವನ್ನು ನೀಡುತ್ತಿರುವೆ?" ಎಂದು ಉಲ್ಲಾಸಚಿತ್ತನಾಗಿ ನುಡಿದನು ಅವನ ಮಾತುಗಳ ಅರ್ಥವು ನನಗೆ ತಿಳಿಯಲಿಲ್ಲ.

ಅತ್ತಿಗೆಯು ಮಾತಾಡಲಿಲ್ಲ! ಅವಳ ಕಪೋಲಗಳು ಅರುಣವರ್ಣವನ್ನು ತಾಳಿದುವು. ಲಜ್ಜೆ, ಕೋಪ, ಪರಿಭ್ರಮ ಈ ಭಾವಗಳು ಅವಳ ಕೆನ್ನೆಗಳಿಗೆ ಅದೊಂದು ಮನೋಹರವಾದ ರಂಗನ್ನು ಮೆತ್ತುತಲಿದ್ದುವು.

ಅಣ್ಣನು ಸುಮ್ಮನಿರಲಿಲ್ಲ, "ದೇವಿ, ಅದೇಕೆ ಮೌನವು?" ಎಂದು ಪ್ರಶ್ನಿಸಿದನು.

"ನಾನು ದೇವಿಯಲ್ಲ."

"ಮತ್ತಿನ್ನಾರು? ನನ್ನ ಪಾಲಿನ ದೇವಿಯೇ ನೀನು!"

"ಓರ್ವ ಸಾಧಾರಣ ಹೆಂಗಸು"

"ಅಲ್ಲ, ಖಂಡಿತವಾಗಿಯೂ ಅಲ್ಲ. ನಾನು ನಿನ್ನನ್ನು ಓರ್ವ ಸಾಮಾನ್ಯಳಲನೆಯೆಂದು ಗಣಿಸಲಾರೆನು. ಹಾಗಾಗಿದ್ದರೆ ಇಷ್ಟು ಮಹತ್ತಾದ ಪರಿವರ್ತನೆಗಳು ಎಂದಿಗೂ ಸಾಧ್ಯವಿಲ್ಲ!"

"ಯಾವ ಪರಿವರ್ತನೆ?"

"ನೀನೀ ಮನೆಯನ್ನು ಪ್ರವೇಶಿಸುವಾಗ ಇಲ್ಲಿನ ಅವಸ್ಥೆಯು ಹೇಗಿದ್ದಿತು? ಈಗ ಹೇಗಿದೆ? ಆ ಮಾರ್ಪು ದೇವಿಯ ಕೃಪಾಬಲದಿಂದಲ್ಲವೇ?"

"ನನಗೆ ತಿಳಿಯಲಿಲ್ಲ. ನಿಮ್ಮ ಮಾತುಗಳ ಗುಟ್ಟು ನನಗೆ ಸಿಗಲೊಲ್ಲದು!"

ಅಣ್ಣನು ಮಾತಾಡದೆ ಅವಳ ಹತ್ತಿರ ಬಂದು ನಿಂತನು. ಅವಳ ಕರವೊಂದನ್ನು ಹಿಡಿದು ಅವಳ ಮುಖವನ್ನವಲೋಕಿಸಿದನು. ಅವಳ ಲೋಚನಗಳಲ್ಲಿ ಅವನು ಯಾವ ಲಿಪಿಗಳನ್ನು ಓದುತ್ತಲಿರುವನೆಂಬುದು ನನಗೆ ತಿಳಿಯಲಿಲ್ಲ.

ಎರಡು ನಿಮಿಷಗಳ ವರೆಗೆ ಹೂದೋಟದಲ್ಲಿ ಮೌನವು ವ್ಯಾಪಿಸಿತು ನಾನೂ, ಸುಬ್ಬುವೂ ಮಾತಾಡದೆ ನಿಂತೆವು. ನಾವು ಬಾಲಕರು; ಕಣ್ಣುಗಳ ಭಾಷೆಯು ನಮಗೆ ತಿಳಿಯದು; ಆದರೆ ಈಗ ನಾನು ಕಣ್ಣುಗಳಲ್ಲಿ ಹೊರಸೂಸುವ ಸಂಗತಿಗಳ ತಾತ್ಪರ್ಯವನ್ನು ನುಡಿಗಳ ಅರ್ಥಕ್ಕಿಂತಲೂ ಚೆನ್ನಾಗಿ ಗ್ರಹಿಸಬಲ್ಲೆನು.

'ನಾಗೀ....'ಎಂಬ ಸ್ವರವು ಅಣ್ಣನ ತುಟಿಗಳನ್ನು ಬಿರಿದು ಹೊರಗೆ ಬಂದಿತು. ನೋಡಿ, ಇದುವರೆಗೆ ನಾನು ನನ್ನ ಒಲವಿನ ಅತ್ತಿಗೆಯ ಹೆಸರನ್ನೇ ಮರೆತಿದ್ದೆನು. ಈಗ ಜ್ಞಾಪಕಕ್ಕೆ ಬಂದಿದೆ; ಅವಳ ಹೆಸರು ನಾಗರತ್ನ ಎಂದಾಗಿರುವುದು

"ಏನು!" ಎಂದು ಪುಳಕಿತಳಾಗಿ ಅತ್ತಿಗೆಯು ಪ್ರಶ್ನಿಸಿದಳು.

"ಇದೆಲ್ಲವೂ ನಿನ್ನ ಪ್ರಭಾವ!"

"ಯಾವದು?"

"ಇಲ್ಲಿ ಕಾಣುವುದೆಲ್ಲ! ಈ ಹೂದೋಟ-ಸುಂದರವಾಗಿ ನಗುತ್ತಿರುವ ಈ ಸುಮಗಳು-ಇಲ್ಲಿ ನಲಿದಾಡುತ್ತಿರುವ ಹರ್ಷ-ಇವುಗಳೆಲ್ಲವೂ ನಿನ್ನವಾಗಿರುತ್ತವೆ. ನೀನು ಈ ಮನೆಯೊಳಗೆ ಪ್ರವೇಶಿಸುವದರ ಮೊದಲು ಇದು ಒಂದು ಸ್ಮಶಾನ ಭೂಮಿಯಂತೆ ಶೋಕನಿಬಿಡವಾಗಿದ್ದಿತು. ಜೀವನವು ಅತ್ಯಂತ ಬೇಸರವಾಗಿದ್ದಿತು; ಆದರೆ ಈಗ ಎಷ್ಟು ಆನಂದಮಯವಾಗಿದೆ! ಒಂದು ವಿಷಾದಮಯದ ಚಳಿಗಾಲದಲ್ಲಿ ಪ್ರಯಾಣ ಮಾಡುತ್ತಲಿದ್ದ ನಮ್ಮ ಬಾಳು ಈಗ ವಸಂತ ಕಾಲದಲ್ಲಿ ಪಾದಾರ್ಪಣ ಮಾಡಿರುವದು. ಶೀನು-ತುಂಟನಾಗಿದ್ದ ಶೀನು-ಈಗ ಎಷ್ಟು ಉತ್ತಮವಾದ ದಾರಿಯನ್ನು ಹಿಡಿದಿರುವನು! ಇವುಗಳಿಗೆಲ್ಲ ಹಿಂದಲಿನ ಪ್ರೇರಕ ಶಕ್ತಿಯು ನೀನಲ್ಲದೆ ಇನ್ನಾರು?-ನೀನು ನನ್ನ ಪಾಲಿನ ದೇವತೆಯು!"

ಈ ವಚನಗಳು ನಮ್ಮ ಅಣ್ಣನ ಹೃದಯದ ಅಂತರಾಳದಿಂದ ಹೊರಟವುಗಳಾಗಿರುತ್ತವೆ ಎಂಬುದಕ್ಕೆ ಯಾವ ಸಂದೇಹವೂ ಇಲ್ಲ. ಅವನ ಆಗಲಿನ ಧ್ವನಿಯು

ಅವನೆಷ್ಟು ಆತ್ಮಾರ್ಥವಾಗಿ ನುಡಿಯುತ್ತಲಿರುವನೆಂದೂ, ಅವನಿಗೆ ಅತ್ತಿಗೆಯ ಮೇಲೆ ಅದೆಷ್ಟು ಅಪಾರ ಪ್ರೇಮವಿದೆಯೆಂದೂ-ಸೂಚಿಸುತ್ತಲಿದ್ದುವು. ಅಣ್ಣನ ನುಡಿಗಳು ಬರಿಯ ಆಡಂಬರದ ಮಾತುಗಳಾಗಿರಲಿಲ್ಲ. ನಿಜವಾಗಿಯೂ ಅತ್ತಿಗೆಯು ದೇವಿಯಾಗಿದ್ದಳು. ಅವಳ ಆಗಮನದಿಂದ ನಮ್ಮ ನಿಕೇತನವು ಅಣ್ಣನು ಹೇಳುವಂತೆ ಜೀವನದ ವಸಂತದಿಂದ ತುಂಬಿದ್ದಿತು. ಅಣ್ಣನ ಹೃದಯವು ಎಷ್ಟು ಪ್ರೇಮಮಯವೆಂದು ನಾನು ವಿವರಿಸಲು ಶಕ್ತನಲ್ಲ; ಹಲವು ಸಾರೆ ಅಷ್ಟು ದೃಢವಾಗಿ, ಅಷ್ಟು ನಿಷ್ಕಲಂಕವಾಗಿ ನನ್ನಾಕೆಯನ್ನು ಪ್ರೀತಿಸಬೇಕೆಂಬ ಬಯಕೆಯು ನನ್ನಲ್ಲಿ ಈಗ ಉದ್ಭವಿಸುತ್ತಲಿರುವುದು; ಆದರೆ ದುರ್ದೈವವಶಾತ್ ಅಣ್ಣನಂತೆ ಅಷ್ಟು ಉನ್ನತವಾದ ಆ ಪ್ರದೇಶಕ್ಕೆ ತಲುಪುವುದು ನನಗೆ ಚೈತನ್ಯವಿಲ್ಲ.

ಅತ್ತಿಗೆಯ ಕಪೋಲಗಳು ಅಣ್ಣನ ಸ್ತುತಿಗೀತೆಗಳ ಶ್ರವಣದ ನಂತರ ಅವಳು ಮುಡಿದಿರುವ ಗುಲಾಬೀ ಹೂವಿನಂತೆ ರಕ್ತವರ್ಣವನ್ನು ತಾಳಿದುವು. ಆ ಮುಖವು ಆಗ ಅಭಿಮಾನ, ಆನಂದ, ಪ್ರೇಮ ಎಂಬಿತ್ಯಾದಿ ಭಾವಗಳ ಒಂದು ಸಮುಚ್ಚಯ ರೂಪವಾಗಿದ್ದಿತು. ಆ ಚಿತ್ರವನ್ನು ನಾನು ಈಗಲೂ, ಅಂದು ನೋಡಿದಂತೆಯೇ ಚಿತ್ರಿಸಬಲ್ಲೆನು.

ಅವಳು ಮಾತಾಡಲಿಲ್ಲ; ಮೌನವನ್ನವಲಂಬಿಸಿ ಬಾಲಕರಾದ ನಮ್ಮಿಬ್ಬರ ಕಡೆಗೊಂದು ಬಾರಿ-ತನ್ನ ಪತಿಯ ವದನದ ಕಡೆಗೊಂದು ಬಾರಿ-ಹೀಗೆ ನೋಡುತ್ತ ನಿಂತಳು. ಮಲ್ಲಿಗೆಯ ಸುವಾಸನೆಯು ನಮ್ಮಲ್ಲಿ ಹರ್ಷವನ್ನು ಬಳೆಯುತ್ತಲಿದ್ದಿತು. ಮಂದವಾಗಿ ಬೀಸುತ್ತಿರುವ ತಂಗಾಳಿಯು ನಮ್ಮ ದೇಹಗಳನ್ನು ಸ್ಪರ್ಶಿಸಿ ನಮ್ಮೆಲ್ಲರ ಬಳಲಿಕೆಯನ್ನು ದೂರಮಾಡುತ್ತಲಿದ್ದಿತು. ಜೀವನವು ಸದಾ ಹೀಗೆ ಆನಂದಮಯವಾಗಿರಬಾರದೇಕೆ?

ಚಿತ್ರದಲ್ಲಿ ಕಾಣುತ್ತಲಿರುವ ನರಜೀವಿಗಳಂತೆ ಆ ಹೂದೋಟದಲ್ಲಿ ನಾವು ಬಹಳ ನೇರ ನಿಂತಿರುವಂತೆ ತೋರುತ್ತದೆ. ಯಾರ ವದನಗಳಿಂದಲೂ ವಚನಗಳ ಮುತ್ತುಗಳು ಹೊರಬೀಳವು. ಸೃಷ್ಟಿದೇವತೆಯ ರಮಣೀಯತೆಯ ಬಲೆಯು ನಮ್ಮೆಲ್ಲರ ಮೇಲೆಯೂ ವ್ಯಾಪಿಸಿದ್ದಿತು. ರಾತ್ರಿಯು ಲೋಕವನ್ನು ತನ್ನ ಕಪ್ಪಾದ ಸೀರೆಯ ಸೆರಗಿನಿಂದ ಮುಚ್ಚಲು ಪ್ರಾರಂಭಿಸಿದಳು. ದೂರದ ಗಣಪತೀ ಕ್ಷೇತ್ರದಲ್ಲಿ ನಡೆಯುತ್ತಿರುವ ಸಂಧ್ಯಾರಾಧನೆಯ ಚಿಕ್ಕೆಯಾದ ಗಂಟೆಗಳ ನಿನಾದವು ಕೇಳಬಂದಿತು.

'ಸಂಧ್ಯೆಯಾಯಿತು, ತುಲಸಿಗೆ ದೀಪವನ್ನು ಮಡುಗುವೆನು.' ಎಂದಳು ಅತ್ತಿಗೆ.

ಅವಳು ಹಂಸವು ಜಲಾಶಯದಲ್ಲಿ ತೇಲುತ್ತ ಹೋಗುತ್ತಿರುವಂತೆ ಮನೆಯೊಳಗೆ ನಡೆದಳು. ನಾವಿಬ್ಬರೂ ಹುಡುಗರು ತುಲಸಿಯ ಕಟ್ಟೆಯ ಸಮೀಪಕ್ಕೆ ತೆರಳಿ ಕುಳಿತುಕೊಂಡೆವು. ನಮ್ಮ ಸಂತೋಷವನ್ನು ಕಂಡು ತಾರೆಗಳು ಆಕಾಶದಲ್ಲಿ ಹಿಗ್ಗುತ್ತಲಿದ್ದುವು.

ಅತ್ತಿಗೆಯು ಹಣತೆಯನ್ನು ಹೊತ್ತಿಸಿ ತಂದು ತುಲಸಿಯ ಮುಂದೆ ಮಡುಗಿ, ತುಲಸೀ ಗಿಡಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಗೈದಳು. ದೀಪವು ಉರಿಯುತ್ತ ಕತ್ತಲೆಯನ್ನು ಸೀಳುತ್ತಲಿದ್ದಿತು. ಅತ್ತಿಗೆಯು ತುಲಸಿಯ ಮುಂದೆ ನಿಂತುಕೊಂಡು, ಮಂಜುಳವಾದ ಸ್ವರದಲ್ಲಿ ಹೀಗೆ ಹಾಡಿದಳು:—

ದೇವ ಜಗದೀಶ ಪೊರೆಯುವ ಸದಾ
ನಿನ್ನಯ ಭಕ್ತರನು ಆನಂದ ಸುಖವ
ನೀಡೆಮಗೆ ನಿನ್ನಯ ಧ್ಯಾನವದು ನೆಲೆ-
ಸಲೆಮ್ಮ ಮನದೊಳಗೆ ಇರುಳೊಳು ಪಥವ
ಕಾಣದೇ ನೊಂದಿಹ ನರರಿಗೆ ದೋರು ನೀನು
ಕರುಣೆಯಲಿ ದಾರಿಯನು ಸರ್ವತ್ರ ವೊಳಗು-
ತಿರಲಿ ನಿನ್ನಯಾ ಪಾವನದ ನಾಮ! ಎನ್ನ
ಹೃದಯದೇಗುಲದಿ ನೆಲಸು ಮುರಾರಿ ಕೇಶವಾ!

ಈ ಇಂಪಾದ ಗಾನವು ಶಾಂತತೆಯನ್ನು ಭೇದಿಸಿತು. ದೇವರ ಸ್ಮರಣೆಯು ನನ್ನ ಬಾಲಕನ ಹೃದಯದಲ್ಲಿ ಧ್ವನಿಸತೊಡಗಿತು ಈ ಗಾನದ ತಾತ್ಪರ್ಯವು ನನಗಂದು ಹೊಳೆಯದಿದ್ದರೂ, ವಿಶ್ವಾತೀತವಾದ ಅದೊಂದು ಚೈತನ್ಯವು ಲೋಕ ವನ್ನಾಳುತ್ತಿದೆ ಎಂಬ ಭಾವನೆಯು ನನ್ನ ಎದೆಯಲ್ಲಿ ತುಂಬಿ ತುಳುಕಲು ಪ್ರಾರಂಭಿಸಿತು; ಆದರೆ ಆ ಚೈತನ್ಯದ ಕಿಡಿಯೊಂದು ನಮ್ಮ ಆತ್ಮಗಳಲ್ಲಿ ಬೆಳಗುತ್ತಿದೆ, ಎಂಬ ರಹಸ್ಯವು ಆಗ ನನಗೆ ತಿಳಿದಿರಲಿಲ್ಲ

"ಕತ್ತಲೆಯಾಯಿತು; ಮನೆಯೊಳಗೆ ಹೋಗೋಣ ನೀನು ಸಾಳೆಯಸ್ಕೂಲಿನ ಪಾಠಗಳನ್ನು ಗಟ್ಟಿ ಮಾಡು" ಎಂಬುವ ನಮ್ಮ ಅಣ್ಣಾನ ನುಡಿಗಳು ನನ್ನನ್ನು ವಿಚಾರ ಲೋಕದಿಂದ ಎಚ್ಚರಿಸಿದುವು.

ಸುಬ್ಬುವು ಹಾಸ್ಟೆಲ್ಲಿಗೆ ತೆರಳಿದನು ನಾನು ಮನೆಯೊಳಗೆ ಪ್ರವೇಶಿಸಿದೆನು.

## [ ೮ ]

ದಿನಗಳು ಒಂದೊಂದಾಗಿ ಗಮಿಸಿದುವು. ನಮ್ಮ ಪುಟ್ಟ ಸಂಸಾರದ ನೌಕೆಯು ಜೀವನದ ಪ್ರವಾಹದಲ್ಲಿ ಯಾವ ತೊಂದರೆಗಳೂ ಇಲ್ಲದೆ ಮುಂದೆ ಮುಂದೆ ತೆರಳುತ್ತಲಿದ್ದಿತು. ಆನಂದ, ಹರ್ಷ ಮತ್ತು ಉತ್ಸಾಹಗಳು ಸರ್ವತ್ರ ನಲಿದಾಡುತ್ತಲಿದ್ದುವು. ಮೊದಲು ನನ್ನ ಬಾಲ್ಯದ ಪ್ರಥಮ ದಿನಗಳಲ್ಲಿ ಇದ್ದಂತೆ ಬೇಸರಿಕೆಯು ಬಾಳಿನಲ್ಲಿ ತೋರುತ್ತಿರಲಿಲ್ಲ. ನನ್ನ ಮನಸ್ಸು ತುಂಟತನವನ್ನು ತ್ಯಜಿಸಿ ಸರಿಯಾದ ಮಾರ್ಗ ವನ್ನು ಹಿಡಿದಿದ್ದಿತು. ಮೊದಲು ಅತ್ಯಂತ ಬೇಸರವೂ ನಿರಸವೂ ಆದ ಕೃತ್ಯಗಳು ಈಗ ನನ್ನ ಮನಸ್ಸಿಗೆ ಅತ್ಯಂತ ಹರ್ಷದಾಯಕಗಳಾಗಿ ತೋರತೊಡಗಿದುವು.

ನಮ್ಮ ಹೂದೋಟ, ಕಾಯಿಪಲ್ಲೆಗಳ ತೋಟ ಇವುಗಳು ಅತ್ಯುತ್ತಮ ರೀತಿ ಯಲ್ಲಿದ್ದುವು. ನಮ್ಮ ಅಣ್ಣಾನ ಎರಡು ರೂಪಾಯಿಗಳ ಸನ್ಮಾನವನ್ನು ಸುಬ್ಬುವು

ಸಂಪಾದಿಸಿದನು. ನಮಗೆಲ್ಲರಿಗಿಂತಲೂ ಅವನೇ ಚನ್ನಾಗಿ ಕಾಯಿ-ಪಲ್ಯಗಳನ್ನು ಬೆಳೆದಿದ್ದನು. ಅವನು ಪಾರಿತೋಷಕವನ್ನು ಪಡೆದುದರಲ್ಲಿ ಯಾವ ವ್ಯಸನವೂ ನನಗಿರುವದಿಲ್ಲ. ಅವನು ಅಷ್ಟು ಉತ್ತಮ ರೀತಿಯಲ್ಲಿ ಪ್ರಯತ್ನಿಸಿ ಆ ಪಾರಿತೋಷಕವನ್ನು ಪಡೆದುದು ನನಗೆ ಅತ್ಯಂತ ಆನಂದದ ಸಂಗತಿಯಾಗಿದೆ.

ಅದು ಹಾಗಿರಲಿ. ಮೊದಲು ಪುಸ್ತಕಗಳನ್ನು ಓದುವದು ಅತ್ಯಂತ ನೀರಸವಾದ ಕೆಲಸವೆಂದು ನಾನು ಭಾವಿಸಿದ್ದೆನು, ಆದರೆ ಅತ್ತಿಗೆಯ ಸಹವಾಸದಿಂದ ನನ್ನ ಆ ಅಭಿಪ್ರಾಯವು ದೂರವಾಯಿತು. ಪುಸ್ತಕವನ್ನು ಓದಿ ಅದರ ಸತ್ವವನ್ನು ಹೀರಿ ಆನಂದಿಸುವದನ್ನು ನಾನು ಕಲಿತುಕೊಂಡೆನು. ಕ್ರಮೇಣ ನನ್ನ ಜೀವನದಲ್ಲಿ ಪುಸ್ತಕವಾಚನವು ಒಂದು ಪ್ರಧಾನ ಅಭ್ಯಾಸವಾಗಿ ಪರಿಣಮಿಸಿತು. ಈಗ ನನಗೆ ಪುಸ್ತಕಗಳೆಂದರೆ, ಒಂದು ದೊಡ್ಡ ಹುಚ್ಚು! ಹಲವು ಸಾರೆ ನನ್ನ ದೈನಂದಿನ ಕರ್ಮಗಳನ್ನು ಮರೆತು-ಆಹಾರ ಸ್ನಾನಾದಿಗಳನ್ನು ಮರೆತು-ಯಾವುದಾದರೂ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ತಾಸು ತಾಸುಗಳ ಪರ್ಯಂತ ಕುಳಿತು ಬಿಡುವೆನು. ಈ ಸಂದರ್ಭಗಳಲ್ಲಿ ನನ್ನ ವರ್ತನೆಯನ್ನು ಕಂಡು ನನ್ನ ಮಡದಿಯು ಸಿಟ್ಟು ಮಾಡುವದೂ ಒಂದು ಸಾಧಾರಣ ಸಂಗತಿಯು, ಈ ವಾಚನದಿಂದ ನಮಗೆ ಯಾವ ಪ್ರಯೋಜನವೆಂದು ನುಡಿಯಲು ಬರುವಂತಿಲ್ಲ.

ನಾನು ಪುಸ್ತಕಗಳನ್ನು ಓದುವದರಲ್ಲಿ ಅತ್ಯಂತ ಆಸಕ್ತನಾಗಿದ್ದುದರಿಂದ, ದಿನವೂ ಶಾಲೆಯಿಂದ ಬರುವಾಗ ಶಾಲಾವಾಚನಾಲಯದಿಂದ ಯಾವುದಾದರೂ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡೇ ನಾನು ಮನೆಗೆ ಬರುತ್ತಲಿದ್ದೆನು ನನ್ನ ಕೈಯಲ್ಲಿ ಪುಸ್ತಕವು ಗೋಚರವಾದರೆ, ಅದಾವ ಪುಸ್ತಕವೆಂದು ಅತ್ತಿಗೆಯು ಪ್ರಶ್ನಿಸದೆ ಇರುತ್ತಿರಲಿಲ್ಲ. ನಾವಿಬ್ಬರೂ ಸೇರಿ ಆ ಪುಸ್ತಕವನ್ನು ಓದಿ ಮುಗಿಸುತ್ತಲಿದ್ದೆವು ಆ ಕಾಲದಲ್ಲಿ ನಾನು ಓದಿದ ಗ್ರಂಥಗಳಲ್ಲಿ ಗಳಗನಾಥರ ಮಾಧವಕರುಣಾವಿಲಾಸ, ಸತ್ವಸಾರ, ಶಿವಪ್ರಭುವಿನ ಪುಣ್ಯ, ಮರಾಟರ ಅಭ್ಯುದಯ, ಕ್ಷಾತ್ರತೇಜ ಎಂಬಿತ್ಯಾದಿ ಕಾದಂಬರಿಗಳನ್ನೂ ಕೇ. ಶೇ. ಬಿ. ವೆಂಕಟಾಚಾರ್ಯರ ನಾವೆಲುಗಳನ್ನೂ ಶ್ರೀ ಕುರುಡಿಯವರ ಪದ್ಮನಿಯನ್ನೂ ಎಂದಿಗೂ ಮರೆಯಲು ಸಾಧ್ಯವಿಲ್ಲ. ಪದ್ಮಿನಿಯನ್ನು ಓದುವಾಗಲಂತೂ ಆ ಕತೆಯ ಹಲವು ವಿಷಾದ ಘಟ್ಟಗಳಲ್ಲಿ ನಾನೂ ಅತ್ತಿಗೆಯೂ ನೇತ್ರಗಳಿಂದ ಬಾಷ್ಪವನ್ನು ಸುರಿಸುತ್ತಲಿದ್ದೆವು. ಅದು ಅತ್ಯಂತ ಹೃದಯಾಕರ್ಷಕವಾದ ಒಂದು ಕತೆಯಾಗಿದೆ; ಈಗಲೂ ಆ ಕತೆಯನ್ನು ಓದುವಾಗ ಬಾಲ್ಯದಲ್ಲಿ ನನ್ನ ನೇತ್ರಗಳಿಂದ ಕಂಬನಿಯು ಪ್ರವಹಿಸಿದಂತೆ ಕಣ್ಣೀರು ಹೊರ ಸೂಸುವುದು!

ರಾತ್ರಿ ಊಟವಾದೊಡನೆಯೇ ಅತ್ತಿಗೆಯು ನನ್ನ ಕೋಣೆಗೆ ಬರುತ್ತಿದ್ದಳು ನಾವಿಬ್ಬರೂ ಸೇರಿ ಯಾವುದಾದರೂ ಒಂದು ನಾವೆಲ್ಲಾಗಲಿ, ಕತೆಯನ್ನಾಗಲಿ ಓದಿ ಮುಗಿಸುವೆವು. ಹಲವು ಸಾರೆ ಅವಳೇ ತನ್ನ ಮಂಜುಳವಾದ ಸ್ವರದಲ್ಲಿ ಪುಸ್ತಕ

ವನ್ನು ಓದುವಳು. ನಾನು ನನ್ನ ಸ್ಟೂಲಿನಲ್ಲಿ ಕುಳಿತುಕೊಂಡು ಅತ್ಯಂತ ಶ್ರದ್ಧೆಯಿಂದ ಕೇಳುತ್ತಿರುವೆನು; ಇಲ್ಲದಿದ್ದರೆ ನಾನು ಓದುವೆನು, ಅವಳು ಆಲಿಸುವಳು. ಕೆಲವು ಸಾರೆ ನಾವು ನಮ್ಮ ವಾಚನವನ್ನು ನಿಲ್ಲಿಸಿ, ಪುಸ್ತಕದಲ್ಲಿ ನಿರೂಪಿಸಿದ ಸಂಗತಿಯನ್ನು ಕುರಿತು ಚರ್ಚಿಸುವದುಂಟು.

ಅವೊಂದು ದಿನ ನಾವು ಲಕ್ಷ್ಮೀಶ ಕವಿಯ ಜೈಮಿನೀ ಭಾರತವನ್ನು ಓದುತ್ತಲಿದ್ದೆವು ಲಕ್ಷ್ಮೀಶನ ಈ ಕಾವ್ಯವು ನನಗೆ ಅತ್ಯಂತ ಅಕ್ಕರೆಯಾದ ಒಂದು ಪುಸ್ತಕವಾಗಿದೆ. ಈಗಲೂ ನನ್ನ ವಿರಾಮಕಾಲವನ್ನು ನನ್ನ ಆಫೀಸು ಕೋಣೆಯಲ್ಲಿ ಕುಳಿತುಕೊಂಡು ಈ ಕಾವ್ಯದ ಕೆಲವು ಭಾಗಗಳನ್ನು ಓದುವುದರಲ್ಲಿ ಕಳೆಯುವುದು ನನ್ನ ವಾಡಿಕೆಯಾಗಿ ಹೋಗಿದೆ ಆ ದಿನ ನಾವು ಓದುತ್ತಲಿದ್ದುದು ಸೀತಾವನವಾಸದ ಸಂಧಿಯನ್ನಾಗಿದ್ದಿತು. ಅತ್ತಿಗೆಯು ತನ್ನ ಮಂಜುಳವಾದ ಸ್ವರದಲ್ಲಿ ಪದ್ಯಗಳನ್ನು ಓದುತ್ತಲಿದ್ದಳು. ನಾನು ಅತ್ಯಂತ ಶ್ರದ್ಧೆಯಿಂದ ಕೇಳುತ್ತಲಿದ್ದೆನು. ಸೀತೆಯನ್ನು ಲಕ್ಷ್ಮಣನು ಶ್ರೀರಾಮನ ನಿರ್ದೇಶದಂತೆ ವನಾಂತರದಲ್ಲಿ ಕರೆದುಕೊಂಡು ಹೋಗಿ ಬಿಡುವ ಸಂದರ್ಭಕ್ಕೆ ನಾವು ತಲುಪಿದೆವು. ಸೀತೆಯನ್ನು ಅನಾಥೆಯನ್ನಾಗಿ ಮಾಡಿ, ಅರಣ್ಯದಲ್ಲಿ ಪರಿತ್ಯಜಿಸಿ, ಶೋಕವಿಹ್ವಲನಾದ ಲಕ್ಷ್ಮಣನು ಹಿಂದಿರುಗುವಾಗ ವಿಪಿನ ಜೀವಿಗಳೊಡನೆ ಸೀತೆಯನ್ನು ಕಾಪಾಡಬೇಕೆಂದು ಪ್ರಾರ್ಥಿಸುವ ಪದ್ಯವು ಬಂದಿತು:

ಎಲೆ ವನಸ್ಥಗಳಿರ, ವೃಕ್ಷಗಳಿರ, ಮೃಗ-|
ಗಳಿರ, ಕ್ರಿಮಿ-ಕೀಟಂಗಳಿರ, ಪಕ್ಷಿಗಳಿರ, ಲತೆ |
ಗಳಿರ, ತೃಣ ಗುಲ್ಮಂಗಳಿರ, ಪಂಚ ಭೂತಂಗಳಿರ, ದೆಸೆಗಳಿರ ಕಾವುದು |
ಎಲೆ ಧರ್ಮ ದೇವತೆ ಜಗಜ್ಜನನಿ ಜಾಹ್ನವಿಯೆ |
ಸಲಹಿಕೊಂಬುದು ಮಾತೆಯನು ಜಾನಕಿಯ |
ನೆಲೆ ತಾಯೆ! ಭೂದೇವಿ, ನಿನ್ನ ಮಗಳಹಳೆಂದು ಸೌಮಿತ್ರಿ ಕೈ ಮುಗಿದನು ||

ಈ ಪದ್ಯವನ್ನು ಓದುವಾಗಲಂತೂ, ನನ್ನ ಹೃದಯವು ಕಾತರಿಸಿತು; ಅತ್ತಿಗೆಯ ನೇತ್ರಗಳಿಂದ ಕಂಬನಿಗಳು ಹರಿಯತೊಡಗಿದವು. ಅವಳು ಓದುವುದನ್ನು ನಿಲ್ಲಿಸಿ, "ಶೀನೂ, ಇದನ್ನು ಓದುವಾಗಲಂತೂ ಮನಸ್ಸು ಕರಗಿ ನೀರಾಗಿ ಹೋಗುತ್ತಿದೆ. ಶ್ರೀರಾಮನು ತನ್ನ ಪತ್ನಿಯನ್ನು ಒಬ್ಬ ರಜಕನ ಮಾತುಗಳನ್ನು ಕೇಳಿ ಪರಿತ್ಯಜಿಸುವಷ್ಟು ಅವಿವೇಕಿಯಾಗಿ ಹೋದನಲ್ಲ!" ಎಂದು ನುಡಿದಳು.

ನಾನು ನಮ್ಮ ಪುರಾಣಕತೆಗಳಲ್ಲಿ ಅತ್ಯಂತ ಉತ್ಕೃಷ್ಟನಾದ ನಾಯಕನೆಂದು ಸಂಕಲ್ಪಿಸಿ, ಮನಸ್ಸಿನಲ್ಲಿ ಆದರ್ಶವಾಗಿಟ್ಟುಕೊಂಡಿದ್ದ ವ್ಯಕ್ತಿಗಳಲ್ಲಿ ಶ್ರೀರಾಮನೂ ಒಬ್ಬನು. ಅವನನ್ನು ಅವಿವೇಕಿಯೆಂದು ಅತ್ತಿಗೆಯು ನುಡಿದುದು ನನಗೆ ವಿಹಿತವಾಗಿ ತೋರಿ ಬರಲಿಲ್ಲ "ಅತ್ತಿಗೆ, ರಾಮನು ಅವಿವೇಕಿಯಲ್ಲ. ಅವನು ತನ್ನ ಧರ್ಮವನ್ನು ಅನುಷ್ಠಿಸಬೇಕಾಗಿ ಬಂದಿತು. ಸೀತೆಯನ್ನು ಪರಿತ್ಯಜಿಸುವಾಗ ಅವನು ಹಂಬಲಿಸಲಿಲ್ಲವೆಂದು ನೀನು ವಿಚಾರಿಸುತ್ತಿರುವೆಯಾ?' ಎಂದೆನು ನಾನು.

"ಪರಿಶುದ್ಧಳಾದ ಪತ್ನಿಯನ್ನು ತ್ಯಜಿಸುವುದು ಯಾವ ಧರ್ಮವೆಂಬುದನ್ನು ನಾನು ತಿಳಿಯೆನು. ಅತ್ಯಂತ ಪತಿವ್ರತೆಯಾಗಿ, ಪಾವನ ಸ್ವರೂಪಳಾಗಿ ಬಾಳುತ್ತಿದ್ದ ಸೀತೆಯನ್ನು ಕ್ರೂರ ಮೃಗಗಳಿಂದ ನಿಬಿಡವಾದ ವಿಪಿನಾಂತರದಲ್ಲಿ ತ್ಯಜಿಸಿದುದು ಶ್ರೀರಾಮನಲ್ಲಿರುವ ಕಠಿಣತೆಯನ್ನು ತೋರಿಸುತ್ತಿರುವುದು!"

"ಯಾವ ದೋಷಕ್ಕೂ ಒಳಗಾಗದೆ, ಪ್ರಜೆಗಳಿಂದ ನಿಂದಿಸಲ್ಪಡದೆ, ರಾಜ್ಯವನ್ನು ಪರಿಪಾಲಿಸುವದು ಪುರಾತನ ಭಾರತದ ಅರಸರು ತಮ್ಮ ಕರ್ತವ್ಯವೆಂದು ಭಾವಿಸುತ್ತಲಿದ್ದರು. ಒಬ್ಬ ರಜಕನು ಶ್ರೀರಾಮನನ್ನು ನಿಂದಿಸಲು, ಆ ದೋಷದಿಂದ ಪಾರಾಗಲು ತನಗೆ ಅದೆಷ್ಟು ಶೋಕಕರವಾಗಿದ್ದರೂ, ಸೀತೆಯನ್ನು ಪರಿತ್ಯಜಿಸುವುದು ತನ್ನ ಕರ್ತವ್ಯವೆಂದು ಭಾವಿಸಿ, ರಾಮನು ಆ ರೀತಿ ವರ್ತಿಸಿದನು. ಸೀತೆಯನ್ನು ಪರಿತ್ಯಜಿಸಿದ ನಂತರ, ಅವನು ಅದಾವ ರೀತಿಯಲ್ಲಿ ಕೊರಗುತ್ತಿದ್ದನೆಂಬ ಚಿತ್ರದಿಂದ ಇದು ವ್ಯಕ್ತವಾಗುವುದು."

"ಸೀತೆಯು ಪರಿಶುದ್ಧಳಾಗಿರುವಳೆ ಎಂಬುದನ್ನು ರಾವಣಸಂಹಾರದ ನಂತರ ಶ್ರೀರಾಮನು ಅಗ್ನಿಮುಖೇನ ಪರೀಕ್ಷಿಸಲಿಲ್ಲವೇ? ಈ ಲೋಕದಲ್ಲಿ ಎಲ್ಲಾ ಜನರನ್ನು ಮೆಚ್ಚಿಸಿ ನಡೆಯುವುದು ಸಾಧ್ಯವಾದ ಕಾರ್ಯವೇ? ಜನರು ತಮ್ಮ ಮನಸ್ಸಿಗೆ ತೋಚಿದಂತೆ ಮಾತಾಡುವುದು ಲೋಕದ ಪದ್ಧತಿಯಾಗಿದೆ. ವಿವೇಕಿಯೂ ಧೀರನೂ ಆದ ಪುರುಷನು ಎಂದಿಗೂ ಎಲ್ಲರನ್ನೂ ಮೆಚ್ಚಿಸಲು ಯತ್ನಿಸಲಾರನು. ಅವನು ಪ್ರಶಂಸೆ ಮತ್ತು ನಿಂದೆ ಇವುಗಳಿಗೆ ಅತೀತನಾಗಿರುವನು"

ಅತ್ತಿಗೆಯ ಈ ವಾದಕ್ಕೆ ಯಾವ ಉತ್ತರವನ್ನು ನೀಡಬೇಕೆಂಬುದು ನನಗೆ ತಿಳಿಯಲಿಲ್ಲ. ನಿಜವಾಗಿಯೂ ಅವಳು ಹೇಳಿದ ಮಾತುಗಳು ಯಥಾರ್ಥವಾಗಿದ್ದುವು. ವಿವೇಕಿಯೂ ದೃಢಮನಸ್ಕನೂ ಆದ ಪುರುಷನು ಎಂದಿಗೂ ಇತರರನ್ನು ಮೆಚ್ಚಿಸಲು ವರ್ತಿಸುವುದಿಲ್ಲ. ಹಾಗಾದರೆ ರಾಮನೇಕೆ ಸೀತೆಯನ್ನು ಪರಿತ್ಯಜಿಸಿದನು? ಅದಲ್ಲದೆ ಅವನು ಅವತಾರಪುರುಷನೆಂದು ನಮ್ಮ ಪುರಾಣಗಳು ನುಡಿಯುತ್ತಲಿರುವುವು. ಅವತಾರ ಪುರುಷರೂ ಸರ್ವಸಾಧಾರಣ ಮನುಷ್ಯರಂತೆ ಅವಿವೇಕದಿಂದ ತಪ್ಪುಗಳನ್ನು ಮಾಡುವರೆ? ರಾಮನು ಸೀತೆಯನ್ನು ತ್ಯಜಿಸಿದುದು, ವಾಲಿಯನ್ನು ಕೊಂದುದು ಎಂಬೀ ಎರಡು ಸಂಗತಿಗಳು ರಾಮಾಯಣ ಓದುವವರನ್ನು ಪೀಡಿಸುತ್ತಲಿವೆ ಎಂಬುದು ನಿರ್ವಿವಾದವು. ವಾಲ್ಮೀಕಿಯಾಗಲೀ, ಇತರ ಕವಿಗಳಾಗಲೀ ಈ ಸಂದೇಹಗಳನ್ನು ಹೋಗಲಾಡಿಸಲು ಯಾವ ಪ್ರಯತ್ನವನ್ನೂ ಮಾಡಿರುವುದಿಲ್ಲ. ರಾಮನು ತಾನು ನರಜೀವಿಯೆಂಬುದನ್ನು ಲೋಕಕ್ಕೆ ತೋರಿಸಲೋಸುಗ ಈ ರೀತಿ ತಪ್ಪುಗಳನ್ನು ಪ್ರವೃತ್ತಿಸಿದನೆಂಬುದರಿಂದ ನಾವು ಸಮಾಧಾನ ಮಾಡಿಕೊಳ್ಳಬೇಕಾಗಿ ಬಂದಿದೆ. ಆದರೂ ಸಂದೇಹಗಳು ನಿವಾರಣೆಯನ್ನು ಹೊಂದುವುದಿಲ್ಲ ರಾಮನು ಸಾಧಾರಣ ಮನುಷ್ಯರಂತೆ ತಪ್ಪುಗಳನ್ನು ಮಾಡಿದರೆ ಅವನು ಅವತಾರ ಪುರುಷನಾಗುವುದು ಹೇಗೆ? ಈ ಹೊಸ ತೊಡಕು ನಮಗೆ ಗಂಟು ಬೀಳುವುದು!

ಸೀತಾ ವನವಾಸದ ಚಿತ್ರವನ್ನು ಲಕ್ಷ್ಮೀಶನು ಅತ್ಯಂತ ಮನೋಹರವಾಗಿ ವರ್ಣಿಸಿದ್ದಾನೆ ಎಂಬುದು ನಿರ್ವಿವಾದವು. ಆ ಪದ್ಯಗಳನ್ನು ಓದುವಾಗ ಆ ವನವಾಸದ ಚಿತ್ರವು ನಮ್ಮ ಕಣ್ಣಿದುರಿಂದೆ ಬಂದು ನಿಂತಂತೆ ತೋರುವುದು. ಅವನು ಅತ್ಯಂತ ಮನೋಹರ ಗೀತೆಗಳನ್ನು ಹಾಡಿರುತ್ತಾನೆ.

ಅತ್ತಿಗೆಯು ಮುಂದೆ ಓದುತ್ತಲಿದ್ದ ಪ್ರತಿಯೊಂದು ಪದ್ಯವು ಸೀತೆಯ ವ್ಯಸನವನ್ನು ಓದುಗರು ಅನುಭವಿಸುವಂತೆ ಮಾಡುತ್ತಲಿದ್ದಿತು. ಈ ಕೆಳಗಿನ ಪದ್ಯಗಳು ನನ್ನ ಎದೆಯನ್ನು ಸೀಳಿದವು:

ಮೊರೆಯಲೊಲ್ಲವು ತುಂಬಿ, ಕುಣಿಯಲೊಲ್ಲವು ನವಿಲ್ |
ಬೆರೆಯಲೊಲ್ಲವು ಕೋಕಿ, ನಡೆಯಲೊಲ್ಲವು ಹಂಸೆ |
ಕರೆಯಲೊಲ್ಲವು ಪಿಕಲಿ, ನುಡಿಯಲೊಲ್ಲವು ಶುಕಂ, ನಲಿಯಲೊಲ್ಲವು ಚಕೋರಿ |
ನೆರೆಯಲೊಲ್ಲವು ಹರಿಣಿ, ಯೊಲೆಯಲ್ಲವು ಕರಿಣಿ |
ಪೊರೆಯಲೊಲ್ಲವು ಚಮರಿ, ಮೆರೆಯಲೊಲ್ಲವು ಸಿಂಗ |
ಮರರೆ! ಜಾನಕಿಯ ಶೋಕಂ ತಮ್ಮದೆಂದಾಕೆಯಂಗಮಂ ನೋಡಿ ನೋಡಿ ||
ಬೀಸಿದುವು ಬಾಲದೊಳು ಚಮರಿಗಳ್ಚಮರವಂ |
ಪಾಸಿದುವು ಕರಿಗಳೆಳೆದಳಿರ ಮೃದು ತಳ್ಪವಂ |
ಸೂಸಿದುವು ಸಾರಸಂಗಳ್ತಮ್ಮ ಗರಿಗಳಂ ತೋದು ತಂಬುಗಳನು |
ಆ ಸಿರಿ ಮೊಗಕ್ಕೆ ಬಿಸಿಲಾಗದಂತಾಗಸದೊ |
ಳೊಸರಿಸದಂಚೆಗಳ ರಂಗೆಮನಗಲ್ಚಿನೆಳ |
ಲಾಸೆಗೈಯ್ದವು ರಾಘವನ ರಾಣಿ ದುಃಖಸಂತಪ್ತೆಯಾಗಿರಲ್ಕೆ ||

ನನ್ನಂತೆಯೇ ಅತ್ತಿಗೆಯ ಹೃದಯವಾದರೂ ಈ ಭಾಗಗಳನ್ನು ಓದುವಾಗ ಕರಗಿ ನೀರಾಗಿ ಹೋಗಿದ್ದಿತು. ಅವಳ ಹೃದಯವೆಷ್ಟು ಕೋಮಲವು! ಈ ಪದ್ಯಗಳನ್ನು ಓದುವಾಗ ಸೀತೆಯ ಶೋಕವು ಅವಳಲ್ಲಿ ಪ್ರತಿಬಿಂಬಿಸುತ್ತಲಿದ್ದಂತೆ ಭಾಸವಾಗುತ್ತಲಿದ್ದಿತು. ಅವಳು ನಿಟ್ಟುಸುರೊಂದನ್ನು ಬಿಟ್ಟು "ಹಾ! ಸೀತೆಯು ಇಷ್ಟು ದುಃಖಗಳನ್ನು ಅನುಭವಿಸುತ್ತಲಿದ್ದರೂ, ರಾಘವನನ್ನು ಸ್ವಲ್ಪವಾದರೂ ನಿಂದಿಸಿರುವುದಿಲ್ಲ! ಅವಳೆಷ್ಟು ಮಹಾಮಹಿಮಳು!" ಎಂಬ ಉದ್ಗಾರಗಳನ್ನು ಹೊರಚೆಲ್ಲಿದಳು! ಆ ಉದ್ಗಾರಗಳಲ್ಲಿ ತಾನು ಸೀತೆಯಾಗಲಿಲ್ಲವಲ್ಲ! ಎಂಬ ಸಂತಾಪವು ಬೆರೆತಿದ್ದಿತು.

ವಾಲ್ಮೀಕಿಯು ರಾಮಾಯಣದಲ್ಲಿ ವಿಶ್ವಕ್ಕೆ ನೀಡಿದುದು ಆದರ್ಶ ವನಿತೆಯನ್ನಾಗಿದೆ. ಪುರಾತನ ಭಾರತಭೂಮಿಯ ವನಿತೆಯರ ನಿಜವಾದ ಸ್ಥಾನವೇನು ಎಂಬುದನ್ನು ವಾಲ್ಮೀಕಿಯು ತನ್ನ ರಾಮಾಯಣದಲ್ಲಿ ಸೀತೆಯ ಚಿತ್ರವನ್ನು ಬರೆದು ತೋರಿಸಿಕೊಟ್ಟಿರುವನು. ಸ್ತ್ರೀ ಸ್ವಾತಂತ್ರ್ಯವೆಂದು ಕೂಗುತ್ತಲಿರುವ ನವಯುಗದ ಸುಧಾರಕರು ಪ್ರಾಚೀನ ಭಾರತವು ವನಿತೆಗೆ ನೀಡಿದ್ದ ಸ್ಥಾನವು ಎಷ್ಟು ಉತ್ಕೃಷ್ಟವಾದದ್ದು ಎಂಬುದನ್ನು ಅರಿಯದಿರುವುದು ಅತ್ಯಂತ ಪರಿತಾಪಕರವಾದ ಸಂಗತಿಯಾಗಿದೆ

ಏನೇ ಇರಲಿ. ಸೀತಾವನವಾಸವು ಲಕ್ಷ್ಮೀಶನ ಭಾರತದಲ್ಲಿ ಅತ್ಯುತ್ಕೃಷ್ಟವಾದ ಒಂದು ರತ್ನವಾಗಿದೆ. ಕನ್ನಡಸಾಹಿತ್ಯದಲ್ಲಿ ಇಷ್ಟು ಮನೋಹರವಾಗಿಯೂ ಲಲಿತ ವಾಗಿಯೂ ಬೇರೊಂದು ರತ್ನವಿರುವುದೇ! ಎಂಬುದು ಸಂದೇಹಾಸ್ಪದವಾಗಿದೆ

ಆ ಸಂಧಿಯನ್ನು ಓದಿ ಮುಗಿಸಿದ ನಂತರ ನಾವು ಓದುವುದನ್ನು ಸಾಕು ಮಾಡಿದೆವು. ಅತ್ತಿಗೆಯು ನನ್ನ ಕೋಣೆಯನ್ನು ತ್ಯಜಿಸಿ, ಹೊರಬಿದ್ದು ತೆರಳಿದಳು. ನಾನು ಮರುದಿನಕ್ಕೆ ಅವಶ್ಯವಿರುವ ಪಾಠಗಳನ್ನು ಕಲಿಯಲು ಪ್ರಾರಂಭಿಸಿದೆನು

ಈ ಕಾಲದಲ್ಲಿ ನಾನು III ಫಾರಂನಲ್ಲಿ ಓದುತ್ತಲಿದ್ದೆನು ಯಾವಾಗಲೂ ಪಾಠಗಳನ್ನು ಓದುವದರಲ್ಲಿ ನನಗೆ ಆಸಕ್ತಿಯು ಕಡಿಮೆಯಾಗಿದ್ದಿತು ನನ್ನ ಪಠ್ಯ ಪುಸ್ತಕಗಳನ್ನು ಬಿಚ್ಚಿ ವಾರಕ್ಕೆ ಒಂದು ಸಲವಾದರೂ ನೋಡುವುದು ದುರ್ಲಭ ವಾಗಿದ್ದಿತು. ಶಾಲೆಯಿಂದ ಹಿಂದಿರುಗಿ ಬಂದ ನಂತರ, ನನ್ನ ಪುಸ್ತಕಗಳನ್ನು ಕೋಣೆಯ ಮೇಜದ ಮೇಲೆ ಮಡುಗಿದರೆ, ಅದನ್ನು ಪುನಃ ಸ್ಪರ್ಶಿಸುವುದು ಮರು ದಿನ ಶಾಲೆಗೆ ತೆರಳುವಾಗ ಮಾತ್ರವಾಗಿದ್ದಿತು. ಕಾರಣವು ಬೇರೆ ಏನೂ ಅಲ್ಲ; ಅವುಗಳನ್ನು ಓದುವುದೆಂದರೆ, ನನಗೆ ಅತ್ಯಂತ ಬೇಸರವಾದ ಒಂದು ಕಾರ್ಯ; ಅವುಗಳಲ್ಲಿ ಹೊಸತು ಏನೂ ಅಲ್ಲ. ವಿಜ್ಞಾನ ಮತ್ತು ಗಣಿತವೆಂಬ ವಿಷಯಗಳು ನನ್ನ ತಲೆಯೊಳಗೆ ಪ್ರವೇಶಿಸವು ಇತಿಹಾಸ ಮತ್ತು ಭೂವಿಂಶಾಸ್ತ್ರ ಇವುಗಳು ನನ್ನಲ್ಲಿ ಸ್ವಲ್ಪ ಉತ್ಸಾಹವನ್ನು ಹುಟ್ಟಿಸುತ್ತಲಿದ್ದವು ಶಾಲೆಯಲ್ಲಿ ಅಧ್ಯಾಪಕರು ವಿಷಯಗಳನ್ನು ಸ್ವಲ್ಪ ಸಾರಸ್ಯವಾಗಿ ಬೋಧಿಸಿದ್ದರೆ, ಹುಡುಗರಿಗೆ ತಿಳಿದುಕೊಳ್ಳಲು ಸುಲಭವಾಗುತ್ತಲಿದ್ದಿತು, ಎಂದು ನಾನು ಭಾವಿಸುತ್ತಲಿರುವೆನು ಪೇಟೆಯಲ್ಲಿ ಸಾಮಾನುಗಳನ್ನು ತಲೆಯ ಮೇಲೆ ಹೊತ್ತುಕೊಂಡು ವಿಕ್ರಯಿಸುತ್ತಿರುವ ವ್ಯಾಪಾ ರಿಯು ತನ್ನ ಸಾಮಾನುಗಳನ್ನು ಗಿರಾಕಿಗಳ ತಲೆಯ ಮೇಲೆ ಹೊರಿಸಲು ಯಾವ ರೀತಿ ಪ್ರಯತ್ನಿಸುವನೋ, ಅದೇ ಮಾದರಿಯ ಪ್ರಯತ್ನವು ಜೀರ್ಣಿಸಲು ಸಾಧ್ಯ ವಿಲ್ಲದ ಪಾಠಗಳನ್ನು ಹುಡುಗರ ತಲೆಯಲ್ಲಿ ತುರುಕಲು ಯತ್ನಿಸುತ್ತಿರುವ ನಮ್ಮ ಉಪಾಧ್ಯಾಯರ ಶಿಕ್ಷಣ ಸಂಪ್ರದಾಯದ್ದಾಗಿದೆ. ಅವರ ಉಪನ್ಯಾಸಗಳನ್ನು ಕೇಳು ವಾಗಲಂತೂ ಹಲವು ಸಾರೆ ನಿದ್ರಿಸಲು ನನಗೆ ಮನಸ್ಸಾಗುತ್ತಿತ್ತು.

ಲೋವರ ಸೆಕೆಂಡರೀ ಕ್ಲಾಸಿನ ಪ್ರಧಾನ ಪರೀಕ್ಷೆಗೆ ಬೇಕಾದ ಪಾಠಗಳನ್ನು ನಾನು ಓದಲೇ ಇಲ್ಲವೆಂದು ಹೇಳಬಹುದು. ಅಣ್ಣನಾದರೋ, ಚೆನ್ನಾಗಿ ಪಾಠ ಗಳನ್ನು ಅಭ್ಯಾಸ ಮಾಡಲು ನನ್ನನ್ನು ಪದೇ ಪದೇ ಉಪದೇಶಿಸುತ್ತಲಿದ್ದನು. ಅವನ ಬೋಧನೆಯನ್ನು ನಾನು ತಲೆಗೆ ಹಾಕಿಕೊಳ್ಳಲಿಲ್ಲ. ನನ್ನ ಸಾಧಾರಣ ಪದ್ಧತಿಯಂತೆ ಪರೀಕ್ಷೆ ದಿನದ ಹಿಂದಲಿನ ರಾತ್ರಿಯಲ್ಲಿಯೂ ಯಾವುದೋ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಓದಲು ಪ್ರಾರಂಭಿಸಿದೆನು

ಈ ಸಮಯದಲ್ಲಿ ನನ್ನ ಅತ್ತಿಗೆಯು ಕೋಣೆಯೊಳಗೆ ಬಂದಳು "ಶೀನೂ, ಯಾವ ಪುಸ್ತಕವನ್ನು ಓದುತ್ತಲಿರುವೆ?" ಎಂದಳು ಅವಳು.

"ವೆಂಕಟಾಚಾರ್ಯರ ವಂಗವಿಜೇತವನ್ನು!"

"ನಾಳೆ ನಿನ್ನ ಪರೀಕ್ಷೆಯಲ್ಲವೆ?" "ಹೌದು ಆದಕ್ಕೇನು?"

"ಈ ದಿನ ಪಾಠಗಳನ್ನು ಓದದೆ ನಾವೆಲನ್ನು ಓದುತ್ತಾ ಕುಳಿತರೆ ಹೇಗೆ?"

"ಪಾಠಗಳನ್ನು ಓದಿದರೆ ಸ್ವಲ್ಪವೂ ತಲೆ ಹಿಡಿಯುವುದಿಲ್ಲ. ಬಹಳ ಬೇಸರ ವಾಗುವುದು."

"ಶೀನೂ, ನೀನು ಪಾಠಗಳ ಕಡೆಗೆ ಆವಶ್ಯವಿರುವ ಶ್ರದ್ಧೆಯನ್ನು ಪತಿಸುವುದಿಲ್ಲ ಪಾಠಗಳನ್ನು ಮನನ ಮಾಡದೆ ಹೋದರೆ ಯಾವ ರೀತಿಯಲ್ಲಿ ನೀನು ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದುವೆ? ಪರೀಕ್ಷೆಯನ್ನು ಚೆನ್ನಾಗಿ ಮಾಡದಿದ್ದರೆ ಒಂದು ವರ್ಷದ ಕಾಲವು ವೃಥಾ ವ್ಯಯವನ್ನು ಹೊಂದುವುದಲ್ಲ!"

"ಪರೀಕ್ಷೆಯಲ್ಲಿ ಪಾಸಾಗಬೇಕೆಂಬ ಆಗ್ರಹವು ನನಗಿರುವುದು. ನಾಳೆಯ ದಿನದ ಪರೀಕ್ಷೆಯಲ್ಲಿ ನನ್ನ ಮೆದುಳಿಗೆ ತೋರಿದ್ದನ್ನು ಬರಿಯುವೆನು. ಪಾಸಾದರೆ ನನ್ನ ಪುಣ್ಯ! ಇಲ್ಲದಿದ್ದರೆ ಹೋಗಲಿ!"

"ನೀನು ಈ ರೀತಿ ನಿನ್ನ ಕೆಲಸಗಳಲ್ಲಿ ಅಸಡ್ಡೆಯನ್ನು ತೋರಿಸಕೂಡದು. ನಾವೆಲ್ಲುಗಳನ್ನು ಪರೀಕ್ಷೆಯ ನಂತರ ವಿರಾಮದಲ್ಲಿ ಓದಿ ಮುಗಿಸಬಹುದು. ಪರೀಕ್ಷೆಯು ಕಳೆದ ಮೇಲೆ ಪಾಠಗಳನ್ನು ಓದಿ ಯಾವ ಪ್ರಯೋಜನವಿದೆ? ಆದುದರಿಂದ ಪಾಠದ ಪುಸ್ತಕಗಳನ್ನು ತೆಗೆದು ಓದು!"

ನಾನು ಖಿನ್ನವದನನಾಗಿ "ವಂಗವಿಜೇತ"ವನ್ನು ಮುಚ್ಚಿ ಮೇಜದ ಮೇಲೆ ಮಡುಗಿದೆನು ನನ್ನ ಇತಿಹಾಸ ಪುಸ್ತಕವನ್ನು ತೆಗೆದು ಓದಲಾರಂಭಿಸಿದೆನು. ಅತ್ತಿಗೆಯು ನನ್ನ ಹತ್ತಿರದ ಸ್ಟೂಲೊಂದನ್ನು ಎಳೆದು, ಅದರಲ್ಲಿ ಕುಳಿತುಕೊಂಡು ವಂಗವಿಜೇತವನ್ನು ಓದಲು ಪ್ರಾರಂಭಿಸಿದಳು. ಈ ಮಾರಿಯು ಕೋಣೆಯಿಂದ ಹೊರಗೆ ತೊಲಗಿದ್ದರೆ, ನಾವೆಲ್ಲನ್ನು ಓದಬಹುದಾಗಿದ್ದಿತೆಂದು ನಾನು ಅವಳನ್ನು ಮನಸ್ಸಿನಲ್ಲಿಯೇ ಶಪಿಸದಿರಲಿಲ್ಲ. ಅವಳು ತಾನು ಕಣ್ಮರೆಯಾದರೆ ನಾನು ಪುನಃ ನಾವೆಲ್ಲನ್ನೇ ಓದುವುದರಲ್ಲಿ ನಿರುತನಾಗುವೆನೆಂದು ಅರಿತಿದ್ದಳು. ಆದುದರಿಂದ ರಾತ್ರಿ ಹತ್ತು ತಾಸಾಗುವವರೆಗೂ ಅವಳು ನನ್ನ ಕೋಣೆಯನ್ನು ಬಿಟ್ಟು ಕದಲಲಿಲ್ಲ. ನಾನು ಮನಸ್ಸಿಲ್ಲದಿದ್ದರೂ ಪಾಠಗಳನ್ನು ಓದಬೇಕಾಗಿ ಬಂದಿತು. ರಾತ್ರಿ ಹತ್ತು ತಾಸಾಗಲು ಅವಳು ನನಗೆ ನಿದ್ರಿಸಲು ಹೇಳಿ ತಾನು ಹೊರಟುಹೋದಳು.

ಅವಳು ತೆರಳಿದೊಡನೆಯೇ ನಾನು ವಂಗವಿಜೇತವನ್ನು ತೆಗೆದುಕೊಂಡು ಒದಲು ಪ್ರಾರಂಭಿಸಿದೆನು. ನಾನು ನಿದ್ರಿಸಿದುದು ಅದನ್ನು ಓದಿಪೂರೈಸಿದ ನಂತರವೇ ಆಗಿದೆ; ಆಗ ಬೆಳಗಿನ ಮೂರು ತಾಸಾಗಿರಬಹುದು. ಏಳು ತಾಸು ಸಮಯವಾಗುವಾಗ ಅತ್ತಿಗೆಯು ಬಂದು ನನ್ನನ್ನು ಹಾಸಿಗೆಯಿಂದ ಎಬ್ಬಿಸಿದಳು.

ಮರುದಿನ ನಡೆದ ಪರೀಕ್ಷೆಯಲ್ಲಿ ನಾನು ಬರೆದುದೇನು? ಎಂಬ ನೆನಪು ನನಗಿರುವುದಿಲ್ಲ ಬಹಳ ಮೋಸವಾಗಿಯೇ ಉತ್ತರಗಳನ್ನು ಬರೆದಿದ್ದೆನು ಎಂಬುದರಲ್ಲಿ

ಯಾವ ಸಂದೇಹವೂ ಇರುವುದಿಲ್ಲ. ರಾತ್ರಿ ನಾನು ಸರಿಯಾಗಿ ನಿದ್ರಿಸದುದರಿಂದ ಪರೀಕ್ಷೆಯ ಹಾಲಿನಲ್ಲಿ ನನ್ನ ಕಣ್ಣುಗಳು ಭಾರವಾಗಿದ್ದುವು. ನಾನು ನಿದ್ರೆಯನ್ನು ತೂಗುತ್ತಿರುವಾಗ ಒಂದು ಬಾರಿ ನನ್ನ ಹಣೆಯು ನನ್ನ ಮುಂದಿರುವ ಮೇಜಕ್ಕೆ ತಾಗಿ ನೋವಾಗದೆ ಇರಲಿಲ್ಲ. ಒಬ್ಬ ಉಪಾಧ್ಯಾಯರು ಇದನ್ನು ನೋಡಿದರೆಂದು ತೋರುತ್ತದೆ. "ಏನಯ್ಯಾ ಶ್ರೀನಿವಾಸಮೂರ್ತಿ, ಪರೀಕ್ಷೆಯ ಹಾಲಿನಲ್ಲಿ ನಿದ್ರಿಸುತ್ತಿರುವೆಯೇನು?" ಎಂಬ ಅವರ ಗರ್ಜನೆಯು ನನ್ನನ್ನು ನಿದ್ರಾಲೋಕದಿಂದ ಜಾಗೃತನನ್ನಾಗಿ ಮಾಡಿತು. ನನ್ನ ಮೆದುಳಲ್ಲಿದ್ದ ಸಂಗತಿಗಳನ್ನು ಪರೀಕ್ಷೆಯ ಕಾಗದಗಳ ಮೇಲೆ ಬರೆದು, ಮೆಲ್ಲನೆ ಹಾಲಿನಿಂದ ಜಾರಿದೆನು.

ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದುವ ನಂಬಿಕೆಯು ನನಗಿರಲಿಲ್ಲ. ಹಾಗೆ ತೇರ್ಗಡೆಯಾದರೆ ಅದು ನನ್ನ ಮಹಾಭಾಗ್ಯದ ಬಲವೆಂದು ಭಾವಿಸಿದ್ದೆನು. ನಾನು ಪರೀಕ್ಷೆಯಲ್ಲಿ ಉತ್ತೀರ್ಣನಾಗಲೂ ಇಲ್ಲ. ಪರೀಕ್ಷೆಯು ಕಳೆದು ಎರಡು ತಿಂಗಳುಗಳಲ್ಲಿಯೇ ಫಲಿತಾಂಶಗಳ ಕಾಗದವು ಹೊರಬಿದ್ದಿತು. ತೇರ್ಗಡೆಯಾದವರ ಹೆಸರುಗಳ ಪಟ್ಟಿಯನ್ನು ನಾನು ನೋಡಿದೆನು. ಅದರಲ್ಲಿ ನನ್ನ ಹೆಸರು ಇರಲಿಲ್ಲ. ಸೋಲು ಮೋರೆ ಮಾಡಿಕೊಂಡು ಹಗಲೆಲ್ಲ ಮೂಟೆಗಳ ಭಾರವನ್ನು ಹೊತ್ತು ಬಳಲಿ, ಸಂಧ್ಯಾಕಾಲದಲ್ಲಿ ವಿರಾಮವನ್ನು ಪಡೆದು ಹುಲ್ಲುಗಾವಲಿಗೆ ತೆರಳುತ್ತಿರುವ ಅಗಸನ ಕತ್ತೆಯ ಹಾಗೆ ನಾನು ಬಾಡಿದ ಮುಖವುಳ್ಳವನಾಗಿ ಮನೆಗೆ ಹಿಂದಿರುಗಿ ಬಂದೆನು. ಅತ್ತಿಗೆಯನ್ನೋ ಅಣ್ಣನನ್ನೋ ನೋಡಲು ನನಗೆ ಧೈರ್ಯ ಬರಲಿಲ್ಲ. ಯಾರಿಗೂ ತಿಳಿಯದಂತೆ ನನ್ನ ಕೋಣೆಯೊಳಗೆ ಪ್ರವೇಶಿಸಿ ಕಂಬಳಿಯನ್ನು ಹೊದೆದುಕೊಂಡು ಹಾಸಿಗೆಯಲ್ಲಿ ಮಲಗಿದೆನು. ದುಃಖದಿಂದ ನನ್ನ ಎದೆಯು ಅತ್ಯಂತ ಭಾರವಾಗಿ ತೋರಿತು. ಕಣ್ಣುಗಳಿಂದ ಒಂದೇಸವನೆ ಬಾಷ್ಪಪ್ರವಾಹವು ಹರಿಯಹತ್ತಿತು.

ಹೊರಗೆ ಅಣ್ಣನು, "ಶುದ್ಧಪೋಲಿ, ನಾನೆಷ್ಟು ಉಪದೇಶಿಸಿದರೂ ಪಾಠಗಳನ್ನು ಕಲಿಯಲಿಲ್ಲ. ಅಯೋಗ್ಯ!" ಎಂದು ಗರ್ಜಿಸುತ್ತಿರುವುದು ನನ್ನ ಕರ್ಣಗಳಲ್ಲಿ ಪತಿಸಿತು.: ಅವನು ಈ ರೀತಿ ನುಡಿಯುತ್ತಿರುವುದು ನನ್ನನ್ನು ಕುರಿತಾಗಿದ್ದಿತೆಂಬುದನ್ನು ನಾನು ಬಲ್ಲೆನು. ನನ್ನೆದೆಯು ಸೋಲಿನಿಂದ ದುಃಖಪರವಶವಾಗಿದ್ದಿತು.

"ಇನ್ನು ರೇಗಿ ಯಾವ ಪ್ರಯೋಜನ! ಪರಿಕ್ಷೆಯಲ್ಲಿ ತನ್ನ ಪರಾಜಯದಿಂದ ಅವನು ಶೋಕಗ್ರಸ್ತನಾಗಿರುವಾಗ, ಅವನನ್ನು ಬೈದು ಇನ್ನಿಷ್ಟು ನಿರಾಶೆಯನ್ನು ಅವನಲ್ಲಿ ಹುಟ್ಟಿಸುವುದು ಸರಿಯಲ್ಲ" ಎಂದು ಅತ್ತಿಗೆಯು ನುಡಿಯುತ್ತಲಿದ್ದಳು. ನನ್ನ ಸೋಲನ್ನು ಕಂಡು ಅವಳು ಅತ್ಯಂತ ಪರಿತಪಿಸಿದಳು. ಅವಳ ಹೃದಯವೆಷ್ಟು ಕಾರುಣ್ಯಮಯವೆಂದು ನನ್ನಲ್ಲಿ ನಾನೇ ನುಡಿದುಕೊಂಡೆನು.

ಊಟದ ಸಮಯವಾದರೂ ಮನೆಯಲ್ಲಿ ನನ್ನನ್ನು ಕಾಣದುದನ್ನು ಕಂಡು, ಅತ್ತಿಗೆಯೂ ಅಣ್ಣನೂ ಪರಿಭ್ರಮಿಸತೊಡಗಿದರೆಂದು ತೋರುತ್ತದೆ. ಅವರು ಮನೆಯ ಎಲ್ಲಾ ಕೋಣೆಗಳಲ್ಲಿಯೂ ನನ್ನನ್ನು ಹುಡುಕತೊಡಗಿದರು. ಅತ್ತಿಗೆಯು

ನನ್ನ ಕೋಣೆಯೊಳಗೆ ಬಂದಳು. ಅವಳು ನಾನು ಹೊದೆದಿದ್ದ ಕಂಬಳಿಯ ಮುಸುಕನ್ನು ತೆಗೆದು. "ಶೀನೂ!" ಎಂದು ನುಡಿದಳು. ನಾನು ಮಾತಾಡಲಿಲ್ಲ.

"ಶೀನೂ ಊಟಕ್ಕೆ ಬಹಳ ಹೊತ್ತಾಯಿತು, ಏಳು!"

"ನನಗೆ ಊಟಬೇಡ" "ಅದೇಕೆ?"

"ಹಸಿವೆಯಿಲ್ಲ."

ನಾನು ಹಸಿವೆಯಿಲ್ಲವೆಂದು ನುಡಿದುದು ಅಸತ್ಯವೆಂದು ಅವಳು ಗ್ರಹಿಸಿದಳು. ನನ್ನ ಹೊಟ್ಟೆಯಲ್ಲಿ ಒಂದು ಸೇರು ಅಕ್ಕಿಯ ಅನ್ನವನ್ನು ಕಬಳಿಸಬಹುದಾದಷ್ಟು ಕ್ಷುದ್ಬಾಧೆಯು ತಳಮಳಿಸುತ್ತಲಿದ್ದಿತು; ಆದರೆ ಪರೀಕ್ಷೆಯಲ್ಲಿ ಸೋತಿರುವ ಲಜ್ಜೆಯಿಂದ ಪೀಡಿತನಾದ ನನಗೆ ಉಣ್ಣಬೇಕೆಂಬ ಆಗ್ರಹವಿರಲಿಲ್ಲ. ಪರೀಕ್ಷೆಯಲ್ಲಿ ಸೋತಿರುವ ಬಾಲಕರನ್ನು ಶಾಲೆಯಲ್ಲಿ ಉಪಾಧ್ಯಾಯರು ಯಾವ ರೀತಿ ಪರಿಹಾಸ ಮಾಡುತ್ತಿರುವರೆಂಬ ಜ್ಞಾನವು ನನಗಿದ್ದಿತು. ಅವರ ಪರಿಹಾಸ್ಯ ವಾಕ್ಯಗಳನ್ನು ಲಾಲಿಸುವುದೆಂದರೆ, ಅತ್ಯಂತ ದಾರುಣವಾದ ಒಂದು ಸಂಗತಿಯಾಗಿದ್ದಿತು.

"ಶೀನೂ, ಈ ವರ್ಷ ಪರೀಕ್ಷೆಯಲ್ಲಿ ಪರಾಜಿತನಾದರೇನು? ಮುಂದಿನ ವರ್ಷ ಕಲಿಯಬಹುದಲ್ಲವೆ! ಆದುದರಿಂದ ಇದನ್ನು ಬಹು ದೊಡ್ಡ ವ್ಯಸನವಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಡ" ಎಂದು ಕರುಣೆಯ ಮಾತುಗಳಿಂದ ಅತ್ತಿಗೆಯು ನನ್ನನ್ನು ಸಂತೈಸಲು ಪ್ರಯತ್ನಿಸುತ್ತಿದ್ದಳು.

"ಅಣ್ಣನು ಬೈಯುತ್ತಾನೆ....ಊಟ ಬೇಡ" ಎಂದು ಮಾತ್ರ ನಾನೆಂದೆನು.

"ಕಂದಾ, ಅಳಬೇಡ. ಈ ವರ್ಷದ ಪರೀಕ್ಷೆಯಲ್ಲಿ ಗೆಲ್ಲದೆ ಹೋದರೆ ಮುಂದಿನ ವರ್ಷದ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಕೂಡದೇ? ಊಟ ಮಾಡದೆ ಹೋದರೆ, ಪರೀಕ್ಷೆಯಲ್ಲಿ ಗತ್ಯಂತಾಗುವದೆ?" ಎಂದು ಹೇಳುತ್ತಾ, ಅವಳು ತನ್ನ ಸೀರೆಯ ಸೆರಗಿನಿಂದ ನನ್ನ ನೇತ್ರಗಳಿಂದ ಹರಿಯುತ್ತಲಿದ್ದ ಬಾಷ್ಪಗಳನ್ನು ಒರಸಿದಳು. ಪ್ರೇಮವು-ನಿಷ್ಕಲಂಕವಾದ ಒಲವು ಆ ಕಣ್ಣುಗಳಲ್ಲಿ ತುಂಬಿ ತುಳುಕುತ್ತಲಿದ್ದಿತು. ಎಷ್ಟು ಕರುಣಾಂಭರಿತಳಾಗಿ ಅವಳು ನನ್ನನ್ನು ಪೋಷಿಸುತ್ತಲಿದ್ದಳೆಂಬುದನ್ನು ಇಲ್ಲಿ ವಿವರಿಸಲು ಅಸದಳವು

ನಾನು ಹಾಸಿಗೆಯಿಂದ ಎದ್ದು, ಕೈಕಾಲು-ಮೋರೆಗಳನ್ನು ತೊಳೆದುಕೊಂಡು, ಊಟಕ್ಕೆ ಕುಳಿತುಕೊಂಡೆನು ಅತ್ತಿಗೆಯ ನಿರ್ದೇಶದಂತೆ ಆಗಿರಬಹುದು;-ಅಣ್ಣನು ನನ್ನ ಸೋಲನ್ನು ಕುರಿತು ಪಿಟ್ಟೆಂದು ಉಸಿರು ಸಹ ಬಿಡಲಿಲ್ಲ. ನಾನು ಬೇಗನೆ ಭೋಜನವನ್ನು ಪೂರೈಸಿ, ನನ್ನ ಕೋಣೆಗೆ ತೆರಳಿದೆನು. ನನ್ನ ಚಿತ್ತದಲ್ಲಿ ಪರೀಕ್ಷೆಯಲ್ಲಿ ಪರಾಜಯವನ್ನು ಹೊಂದಿದ ಚಿಂತೆಯು ನಿಬಿಡವಾಗಿದ್ದುದರಿಂದ, ಆ ರಾತ್ರಿ ನನಗೆ ನಿದ್ರೆಯೇ ಬರಲಿಲ್ಲ. ಸ್ವಲ್ಪ ಸಮಯ ನನ್ನ ರೆಪ್ಪೆಗಳನ್ನು ಮುಚ್ಚಿದ್ದರೂ ದುಃಸ್ವಪ್ನಗಳು ಬಂದು ನನ್ನನ್ನು ಘಾಶಿಪಡಿಸುತ್ತಲಿದ್ದುವು. ಮುಂದಿನ ವರ್ಷದ ಪರೀಕ್ಷೆಯಲ್ಲಿ ನಾನು ಡಿಸ್ಟ್ರಿಕ್ಟಿಗೇ ಫಸ್ಟ್ ಬರಬೇಕೆಂದು ಮನದಲ್ಲಿಯೇ ನಿರ್ಧರಿಸಿದೆನು.

[ ೬ ]

ನನ್ನ ಅತ್ತಿಗೆಯು ಒಂದು ಗಂಡುಮಗುವನ್ನು ಹೆತ್ತಳು; ನಾನು ಚಿಗಪ್ಪನಾದೆನು. ನೋಡುವುದಕ್ಕೆ ಅಂದವಾದ ಕೈಕಾಲುಗಳ, ಪುಟ್ಟ ಬೆರಳುಗಳ, ಮೃದುವಾದ ಕೆನ್ನೆಗಳ ಆ ಕಂದನನ್ನು ಕಂಡು ಆನಂದಿಸದವರಾರು? ಅತ್ತಿಗೆಯಾದರೋ ಮಾತೃಪ್ರೇಮಭರಿತಳಾಗಿ ಆ ಪುಟ್ಟ ಕಂದನನ್ನು ಅತ್ಯಂತ ಒಲವಿನಲ್ಲಿ ಪರಿಪೋಷಿಸುತ್ತಿದ್ದಳು. ಮಗುವಿಗೆ ರಾಮಚಂದ್ರನೆಂದು ನಾಮಕರಣವನ್ನು ಮಾಡಿದರು. ಆ ಮಗುವನ್ನು ಎತ್ತಿಕೊಂಡು ಆಡಿಸುವ, ತೊಟ್ಟಿಲದೊಳಗಿಟ್ಟು ಜೋಗುಳವನ್ನು ಹಾಡುತ್ತ ತೂಗುವ ಕೆಲಸಗಳನ್ನು ನಾನು ಅತ್ಯಂತ ಆಸಕ್ತಿಯಿಂದ ಮಾಡಿದೆನು.

ಕಂದನು ಬೆಳೆದಂತೆಯೇ ತನ್ನ ಬಾಲಲೀಲೆಗಳಿಂದ ತಾಯಿಯನ್ನೂ ಮನೆಯವರೆಲ್ಲರನ್ನೂ ಆನಂದತಲ್ಲೀನರನ್ನಾಗಿ ಮಾಡುತ್ತಲಿದ್ದನು. ಕವಿ ಲಕ್ಷ್ಮೀಶನು ಹಾಡಿದ ಕೆಳಗಿನ ಗೀತೆಯು ನಮ್ಮ ಅಣ್ಣನ ಮಗುವನ್ನು ನೋಡುವಾಗ ನನ್ನ ನೆನಪಿಗೆ ಬರುತ್ತಲಿದ್ದಿತು:

ತೊಟ್ಟಿಲೊಳ್ನಲಿವ, ನೆವವಿಲ್ಲದೆ ನಗುವ, ಬಾಯ್ಗೆ ।
ಬೆಟ್ಟಿಕ್ಕಿ ಪಿರ್ವ, ಪಸಿದೊಡೆ ಚೀರ್ವ, ಮೊಲೆಯುಂಬ !
ಪಟ್ಟಿಂಸೆ ಪೊರಳ್ವ, ಅಂಬೆಗಾಲಗಿಡುವ, ಮೊಳೆವಲ್ಲ ಜೊಲ್ಲುಗೆ ತೊದಲಿಸಿ
ದಟ್ಟಡಿಯಿಡುವ, ನಿಲ್ವೆತೊಡರ್ವ, ಬೇಡುವ ಪರಿವ । ನುಡಿವ ॥
ಬಟ್ಟೆಯೊಳೊರಗುವ, ಕಾಡುವ ಕುಣಿವ ಲೀಲೆಯಂ ।
ನೆಟ್ಟನೆ ಕುಮಾರಕರ್ತೋರಿದರ್ಜಾನರಿಗೆ ವಾಲ್ಮೀಕಿ ಮುನಿವರಂಗೆ ॥

ಕಾರಣವಿಲ್ಲದೆ ಹೊರಸೂಸುವ ನಗು, ಚಂಡಿ ಹಿಡಿದು ಅಳುವುದು, ಬಾಯ್ಗೆ ಬೆರಳನ್ನಿಟ್ಟು ಅಣಕಿಸುವುದು ಈ ಚಿತ್ರಗಳನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಶಿಶುತನವು ಎಷ್ಟು ಪರಿಪಾವನವಾದದ್ದು! ಚಿಂತೆಗಳಿಲ್ಲ; ಕಾಪಟ್ಯದ ನೆರಳು ಹೃದಯದಲ್ಲಿಲ್ಲ. ತಾನು ಪರರೆಂಬ ಭೇದವನ್ನು ಅರಿಯದ ಆ ಕಾಲವು ಮನುಷ್ಯಜೀವನದ ವಸಂತವಾಗಿದೆ. ತಾಯಿಯ ಮೊಗವನ್ನು ನೋಡಿ ನಗುವುದು, ಅಣಕಿಸುವುದು, ಬೀಳುತ್ತ-ಏಳುತ್ತ ಓಡುವುದು ಈ ಕೃತ್ಯಗಳನ್ನೆಲ್ಲ ನೋಡುವುದಕ್ಕೆ ಎಷ್ಟು ಮನೋಹರವಾಗಿದೆ. ಮೈಗೆಲ್ಲ ತಿಪ್ಪೆಯ ಹೊಂಡದ ಕೆಸರನ್ನು ಬಳಿದುಕೊಂಡು ತಾಯಿಯನ್ನೂ ದೊಡ್ಡವರನ್ನೂ ಸಂಭ್ರಮದ ಕಡಲಿನಲ್ಲಿ ಸಂಭ್ರಾಂತರನ್ನಾಗಿ ಮಾಡುವದು ನೋಡಲಿಕ್ಕೆ ಎಷ್ಟು ವಿನೋದಕರವಾಗಿದೆ!

ಏಸು ಸಲ ನೋಡಿದರು ಆಸು ಸಲ ಹೊಸ ಹೊಸದು
ಅದು ಏನು ಮುದ್ದೊ ಮೆಚ್ಚುಮುದ್ದೋ
ತಿಳಿದವರು ತೀರ ತಿಳಿಯದದ್ದು........

(ಕವಿ—ಅಂಬಿಕಾತನಯ ದತ್ತ)

ಎಂಬ ಗೀತೆಯು ಎಷ್ಟು ವಾಸ್ತವವಾಗಿದೆ? ಕಂದನ ಬಾಲಲೀಲೆಗಳನ್ನು ಎಷ್ಟು ಸಲ ಕಂಡರೂ ನಮಗೆ ಎಂದಿಗಾದರೂ ಹಳೆಯುದೆನಿಸುವುದೆ? ಅವನ ಪ್ರತಿಯೊಂದು ಆಟಗಳಲ್ಲಿಯೂ ಹೊಸ ಚಲುವನ್ನು-ಹೊಸ ಸೊಬಗನ್ನು ನಾವು ನೋಡುತ್ತಿರುವೆವು. ನಾವೆಲ್ಲರೂ ಆ ದಾರಿಯನ್ನು ಹಿಡಿದು ಬಂದಿದ್ದರೂ ನಿಷ್ಕಲಂಕವಾದ ಆ ಲೀಲೆಗಳ-ಆ ಆನಂದದ ರಹಸ್ಯವು ನಮಗೆ ತಿಳಿಯದು. ಸಕಲ ತಿಳುವುಗಳನ್ನೂ ಕೊಟ್ಟ ಆ ವಿಶ್ವನಿಯಾಮಕನು, ಮನುಷ್ಯನಿಗೇಕೆ ಬಾಲ್ಯಕಾಲದಲ್ಲಿರುವ ಆನಂದವನ್ನು-ಆ ಸೊಬಗಿನ ಸುಗ್ಗಿಯನ್ನು ನೀಡಲಿಲ್ಲ?

ನಿಜವಾಗಿಯೂ ಆ ಕಂದನು ನಮ್ಮಣ್ಣನ ದಾಂಪತ್ಯಜೀವನದ ಲತೆಯಲ್ಲಿ ವಿಕಾಸವನ್ನು ಪಡೆದ ಸುಮದ ಫಲವಾಗಿದ್ದನು. ಸುಂದರವಾದ ರೂಪು, ತೊದಲ್ನುಡಿ, ಆಟಗಳನ್ನು ಕಂಡು ಅಣ್ಣನು ತಾನು ದೊಡ್ಡವನೆಂಬ ವಿಚಾರವನ್ನೇ ಮರೆತು ಅಂಬೆಗಾಲಿಡುತ್ತಿರುವ ಆ ಕಂದನೊಡನೆ ತಾನೂ ಒಂದು ಮಗುವೆಂದು ಭಾವಿಸುತ್ತ ಆಡತೊಡಗುವನು. ಅಣ್ಣನ ಆಟಗಳನ್ನು ಕಂಡು ಆ ಶಿಶುವು ಕೇಕೆ ಹಾಕಿ ನಗಲು ಪ್ರಾರಂಭಿಸುವುದು. ಮಗುವಿನ ಮುಖಮಂಡಲದಿಂದ ಹೊರಚೆಲ್ಲುವ ಆ ನಿಷ್ಕಲಂಕವಾದ ನಗುವನ್ನು ಅವಲೋಕಿಸಿ, ನಮ್ಮ ಅಣ್ಣನು ಆನಂದತನ್ಮಯನಾಗಿ ಕರತಾಡನೆಯನ್ನು ಮಾಡಿ ತಾನೂ ಒಬ್ಬ ಬಾಲಕನ ಹಾಗೆ ಕುಣಿಯಲು ಪ್ರಾರಂಭಿಸುತ್ತಲಿದ್ದನು

"ನೀವೂ ಚಿಕ್ಕಮಕ್ಕಳ ಹಾಗೆ ಆಡುತ್ತೀರಲ್ಲ!" ಎಂದು ನಮ್ಮಣ್ಣನ ಆ ಸಂತೋಷವನ್ನು ಆನಂದಪುಲುಕಿತ ನೇತ್ರಗಳಿಂದ ಕೂಡಿದವಳಾಗಿ ಅತ್ತಿಗೆಯು ಪ್ರಶ್ನಿಸುತ್ತಲಿದ್ದಳು.

"ಏನೇ ಅದು? ಹುಡುಗನ ಬಾಲ್ಯಲೀಲೆಗಳನ್ನು ನೋಡುವಾಗ ನನಗೂ ಕುಣಿಯಬೇಕೆಂಬ ಆಸೆಯಾಗುವುದು. ನಾನೂ ಹಿಂದಿರುಗಿ-ಆ ರಂಗಭೂಮಿಗೆ ತೆರಳಬೇಕೆಂಬ ಹಂಬಲವು ಜನಿಸುತ್ತಿದೆ; ಆದರೆ ನಮ್ಮ ಈ ಬದುಕಿನಲ್ಲಿ ಎಂದೆಂದಿಗೂ-ಆ ಕಾಲವನ್ನು-ಆ ಬಾಲ್ಯವನ್ನು ಪುನಃ ಸಂಪಾದಿಸಲು ಸಾಧ್ಯವಿಲ್ಲ!" ಎಂದು ಅಣ್ಣನು ತನ್ನ ಹರ್ಷಮಯವಾದ ವಿಚಾರಲೋಕದಿಂದ ಜಾಗ್ರತನಾಗಿ ಈ ಜಗತ್ತಿನಲ್ಲಿರುವ ಜಂಜಾಟದ ಬಾಳನ್ನು ಮನಸ್ಸಿಗೆ ತರುತ್ತ ತನ್ನ ವಿಷಾದಾತ್ಮಕ ಭಾವವನ್ನು ಅವಲಂಬಿಸಿ ಸಂತಾಪಭರಿತನಾಗಿ ನುಡಿವನು.

ಕಂದನು ತನ್ನ ತಾಯಿಯನ್ನು ಕಾಣುವಾಗ ತನ್ನ ಆಟಗಳನ್ನೂ, ವಿನೋದಗಳನ್ನೂ ಪರಿತ್ಯಜಿಸಿ ಇಳುವೋರೆಯನ್ನು ಮಾಡಿಕೊಂಡು, "ಹಮ್ಮಾ ಹಮ್ಮಾ" ಎಂದು ಒದರುತ್ತ, ತನ್ನ ಕೈಗಳನ್ನು ಕುಣಿಸಲು ಪ್ರಾರಂಭಿಸಿದನು. ಕೂಗಿನ ಪರಾಕ್ರಮಗಳನ್ನು ಕಂಡು, ಹರ್ಷಪುಲುಕಿತ ಚಿತ್ತಳಾಗಿ ಅತ್ತಿಗೆಯು ಶಿಶುವನ್ನು ಎತ್ತಿಕೊಂಡು ಸ್ತನ್ಯಪಾನವನ್ನು ನೀಡಿದಳು. ಮೊಲೆಯುಂಡ ಕಂದನು ಸಂತೃಪ್ತಿಯನ್ನು ಪಡೆದು ತನ್ನ ಆಟಗಳ ಲೀಲಾವಿನೋದಗಳಲ್ಲಿ ನಿರತನಾದನು.

ಮೊಲೆಯುಣಿಸಿದ ನಂತರ ಮಗುವನ್ನು ಕೆಳಗಿಳಿಸಿ ತನ್ನ ಕೆಲಸಗಳಿಗೆ

ತೆರಳಲು ಅತ್ತಿಗೆಯು ಉದ್ಯುಕ್ತಳಾಗಲು, ಕಂದನು ತನ್ನನ್ನು ಎತ್ತಿಕೊಳ್ಳಬೇಕೆಂದು ಕಾಡಲು ಪ್ರಾರಂಭಿಸಿದನು. ಆಗ ನಾನು ಆ ಕಂದನನ್ನು ಎತ್ತಿಕೊಂಡು ಹೂದೋಟಕ್ಕೆ ಗಮಿಸಿದೆನು. ಅಲ್ಲಿ ಸುಂದರವಾಗಿ ನಿಂತಿದ್ದ ಪುಷ್ಪಸಂದೋಹವನ್ನು ಕಂಡು ತನಗೆ ಒಂದು ಹೂವು ಬೇಕೆಂಬ ಇಚ್ಛೆಯನ್ನು ತನ್ನ ಕ್ರಂದನವೆಂಬ ಪಾಂಚಜನ್ಯದ ಮೂಲಕ ಪ್ರಕಟಿಸಿದನು. ನಾನು ಹತ್ತಿರದ ಗಿಡದಿಂದ ಒಂದು ಹೂವನ್ನು ಕಿತ್ತು ಅವನ ಕರದಲ್ಲಿತ್ತು ತೃಪ್ತಿಪಡಿಸಲು ಪ್ರಯತ್ನಿಸಿದೆನು; ಆದರೆ ಅವನಿಗೆ ಅದು ಬೇಡವಂತೆ. ಅವನು ಸಿಟ್ಟಿನಿಂದ ಆ ಹೂವನ್ನು ಹಿಚುಕಿ ಬಿಸುಟಿದನು. ಅನಂತರ ಪೂರ್ಣ ವಿಕಾಶವನ್ನು ಹೊಂದಿ ಸುಂದರವಾಗಿ ಪರಿಶೋಭಿಸುತ್ತಿರುವ ಒಂದು ಗುಲಾಬಿ ಹೂವನ್ನು ವೀಕ್ಷಿಸುತ್ತ ತನಗೆ ಆ ಹೂಬೇಕೆಂಬ ಆ ಕಡೆಗೆ ತನ್ನ ಪುಟ್ಟ ಕರಗಳನ್ನು ನೀಡಲು ರಾಮುವು ಪ್ರಾರಂಭಿಸಿದನು.

ಆಗ ನಾನು ಆ ಗಿಡದಿಂದ ಹೂವನ್ನು ಬಿಡಿಸಿ ಅವನ ಕೈಯಲ್ಲಿ ಕೊಟ್ಟೆನು. ಅವನು ಹಲ್ಲಿಲ್ಲದ ತನ್ನ ಬಾಯನ್ನು ಅಗಲವಾಗಿ ತೆರೆದು, ಎರಡೂ ಕರಗಳಲ್ಲಿಯೂ ಆ ಹೂವನ್ನು ಇಸಕೊಂಡನು. ದೊಡ್ಡದಾದ ನಗುವೊಂದು ಅವನ ಎಳೆಯ ಮೊಗದಿಂದ ಹೊರಬಿದ್ದಿತು. ಸುಮವನ್ನು ತನ್ನ ಲೋಚನಗಳ ಹತ್ತಿರ ತೆಗೆದುಕೊಂಡು ಹೋಗಿ, ಒಂದೆರಡು ನಿಮಿಷಗಳ ವರೆಗೆ ಅದರ ಸೊಬಗನ್ನು ನೋಡಿ, ಆಸ್ವಾದಿಸಿದನು. ಆ ಹೂವಿನ ಸೌಂದರ್ಯವು ನಮ್ಮ ಪುಟ್ಟ ರಾಮುವಿಗೂ ಅಪಾರವಾದ ಆನಂದವನ್ನು ನೀಡಿರಬೇಕೆಂದು ತೋರುತ್ತದೆ. ಆ ಹೂವನ್ನು ಅದ್ಭುತ ದೃಷ್ಟಿಯಲ್ಲಿ ಒಂದು ಬಾರಿ ನೋಡುತ್ತಲೂ, ಇನ್ನೊಂದು ಬಾರಿ ನನ್ನ ಮೊಗವನ್ನು ವೀಕ್ಷಿಸುತ್ತಲೂ ಕಂದನು ನಗಲು ಪ್ರಾಸಂಭಿಸಿದನು. ನಿಜವಾಗಿಯೂ ಎಳೆಮೊಗದ ನಗುವು ನೋಡಲು ಬಹು ಚಂದವು! ಬಲಿತವರ ಎದೆಯನ್ನು ಬೇಧಿಸಿಕೊಂಡು ಬರುವ ನಗುವಿನಲ್ಲಿ, ಸ್ವಾಭಾವಿಕವಾದ ಆ ಸರಳತೆಯನ್ನಾಗಲೀ ನಿಷ್ಕಲಂಕತೆಯನ್ನಾಗಲೀ ನೋಡಲು ಸಿಗುವುದು ಪ್ರಯಾಸವಾಗಿದೆ. ದೊಡ್ಡವರ ನಗುವು ಹೃದಯದಂತರಾಳದಿಂದ ಬರುವುದಿಲ್ಲ; ಆ ನಗುವಿಗೂ ನಾಟಕ-ಸಿನೇಮಾಗಳ ನಗುಗಳಿಗೂ ಹೆಚ್ಚಿನ ಅಂತರವೇನೂ ಇರುವುದಿಲ್ಲ.

ಬಾಲಕನು ತಾನು ಸಿ. ವಿ. ರಾಮನ್ನರಿಗಿಂತಲೂ ದೊಡ್ಡ ಸಂಶೋಧಕನಾಗಿರುವೆನೆಂಬದನ್ನು ತೋರಿಸುವದಕ್ಕಾಗಿರಬಹುದು! ಅಂದವಾದ ಗುಲಾಬಿ ಹೂವಿನ ಒಂದೊಂದೇ ದಳವನ್ನು ಕಿತ್ತು ತನ್ನ ನೇತ್ರಗಳ ಬಳಿಗೆ ಒಯ್ದು ಅವುಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೋಧಿಸತೊಡಗಿದನು. ಅದರಿಂದ ಅವನು ತೃಪ್ತನಾಗಲಿಲ್ಲ; ಅವನು ಅದನ್ನು ತನ್ನ ಪುಟ್ಟ ಕರಗಳ ಮಧ್ಯದಲ್ಲಿ ಸೇರಿಸಿದ ನಂತರ ಅದನ್ನು ಹಿಚುಕಿ ಎಸೆದು ಬಿಟ್ಟನು. ಆ ಮೇಲೆ ತನ್ನ ಎಡಗೈಯಲ್ಲಿ ಹಿಡಿದಿದ್ದ ಸುಮದಿಂದ ಬೇರೊಂದು ಎಸಳನ್ನು ಕಿತ್ತು ಪುನಃ ತನ್ನ ಸಂಶೋಧನೆಯನ್ನು ಮುಂದುವರಿಸಿದನು. ಆ ಹೂವಿನ ಎಸಳುಗಳು ತೀರಿಹೋಗುವವರೆಗೆ ಅವನ ಸಂಶೋಧ

ನೆಯು ಮುಗಿಯಲಿಲ್ಲ. ಅದನ್ನು ಮುಂದರಿಸಲು ಬೇರೊಂದು ಸುಮವನ್ನು ನಾನು ಕೊಯ್ದುಕೊಡಬೇಕಾಗಿ ಬಂದಿತು.

ತನ್ನ ಸಂಶೋಧನೆಗಳ ಫಲವಾಗಿ ಹೂಗಳ ಅತ್ಯುತ್ಕೃಷ್ಟವಾದ ಆಹಾರ ಸಾಧನವಾಗಿವೆಯೆಂದು ಅವನು ಕಂಡು ಹಿಡಿದಂತೆ ತೋರುತ್ತದೆ. ತಾನು ತನ್ನ ಸಂಶೋಧನೆಯಲ್ಲಿ ವಿಜಯವನ್ನು ಸಂಪಾದಿಸಿದೆನೆಂಬ ಕೃತಾರ್ಥತೆಯಿಂದ ರಾಮುವು ದೊಡ್ಡದಾದ ಒಂದು ನಗುವನ್ನು ಚೆಲ್ಲಿದನು. ತನ್ನ ಸಂಶೋಧನೆಯ ಫಲವನ್ನು ಪ್ರಯೋಗಕ್ಕೆ ತರುವುದಕ್ಕಾಗಿ ಅವನು ಗುಲಾಬೀ ಹೂವನ್ನು ಬಾಯೊಳಗೆ ಹಾಕಿಕೊಂಡು ಜಗಿಯಲು ಪ್ರಾರಂಭಿಸಿದನು. ಹೂವಿನ ಕೆಂಪುರಸದಿಂದ ಅರುಣವರುಣದ ಅವನ ತುಟಿಗಳು ಇನ್ನಷ್ಟು ಕೆಂಪಾಗಿ ಹೋದವು. ನಾನು ಭೀತಿಯಿಂದ ಅವನ ಬಾಯೊಳಗಿರುವ ಹೂವನ್ನು ಕಿತ್ತು ದೂರ ಎಸೆದೆನು. ಹಿಟ್ಲರನಾಗಲೀ, ಮುಸೋಲಿನಿಯಾಗಲೀ ಅಷ್ಟು ತೀವ್ರವಾಗಿ ಪ್ರತಿಷೇಧಿಸಿರಲಾರರು. ಅದಕ್ಕಿಂತಲೂ ಮಿಗಿಲಾದ ಪ್ರತಿಷೇಧವನ್ನು ಅಳುವಿನ ಮುಖೇನ ನಾನು ಹೂವನ್ನು ಕಿತ್ತೆಸೆವ ಕೃತ್ಯದಲ್ಲಿ ರಾಮುವು ವ್ಯಕ್ತಪಡಿಸಿದನು. ನಾನೆಷ್ಟು ಪ್ರಯತ್ನಿಸಿದರೂ ಅವನ ಕ್ರಂದನವು ನಿಲ್ಲಲಿಲ್ಲ. ಅವನನ್ನು ಶಾಂತಗೊಳಿಸಲು ಅತ್ತಿಗೆಯ ಬಳಿಗೆ ಅವನನ್ನು ಒಯ್ಯಬೇಕಾಗಿ ಬಂದಿತು.

ಆ ಕಾಲದಲ್ಲಿ ನನ್ನ ಪರೀಕ್ಷೆಯೂ ಬಂದಿತು. ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಸಂಪಾದಿಸಬೇಕೆಂಬ ಆಗ್ರಹಭರಿತನಾಗಿ ನಾನು ಅತ್ಯಂತ ಶ್ರದ್ಧೆಯಿಂದ ಓದುತ್ತಲಿದ್ದೆನು. ನನಗೆ ತಿಳಿಯದೆ ಹೋದ ವಿಷಯಗಳನ್ನು ಅತ್ತಿಗೆಯೇ ವಿವರಿಸಿ ಕೊಡುತ್ತಲಿದ್ದಳು. ಅವಳು ಗಣಿತದಲ್ಲಿ ಚೆನ್ನಾಗಿ ಪಾಂಡಿತ್ಯವಿರುವ ಹೆಂಗಸಾಗಿದ್ದಳೆಂದು ಹೇಳಬಹುದು. ನನಗೆ ಮಾಡಲು ಅತ್ಯಂತ ಕಠಿಣವಾಗಿದ್ದ ಲೆಕ್ಕಗಳನ್ನು ಅವಳು ಬಹು ಸುಲಭವಾಗಿ ಮಾಡುತ್ತಲಿದ್ದಳು. ಅವಳು ಯಾವಾಗಲೂ ನನ್ನ ಕೋಣೆಗೆ ಬಂದು ನಾನು ಓದುವುದರಲ್ಲಿ ಆಸಕ್ತನಾಗಿರುವೆನೋ-ಇಲ್ಲವೋ ಎಂಬುದಾಗಿ ಪ್ರತ್ಯೇಕ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಲಿದ್ದಳು. ಅವಳು ಅಷ್ಟು ಎಚ್ಚರಿಕೆಯನ್ನು ತೆಗೆದುಕೊಳ್ಳದೆ ಇದ್ದಿದ್ದರೆ, ಕಳೆದ ವರ್ಷದಂತೆ ನಾನು ಈ ವರ್ಷದ ಪರೀಕ್ಷೆಯಲ್ಲಿಯೂ ಪರಾಜಿತನಾಗುತ್ತಿದ್ದೆನೆಂಬುದರಲ್ಲಿ ಯಾವ ಸಂದೇಹವೂ ಇರುವದಿಲ್ಲ.

ಪರೀಕ್ಷೆಯೆಂದರೆ, ವಿದ್ಯಾರ್ಥಿ ಪ್ರಪಂಚದಲ್ಲಿ ನಡೆಯುವ ಒಂದು ಮಹಾ ಪ್ರಲಯವೆಂದು ಹೇಳಬಹುದು. ಅಧ್ಯಾಪಕರೇ ಪ್ರಲಯರುದ್ರಸ್ವರೂಪಿಗಳು! ಒಂದು ವರ್ಷದ ಪ್ರಯತ್ನದ ಫಲವು ಬಿಂದುವಾಗುವುದು ಒಂದೇ ಒಂದು ವಾರದಲ್ಲಾಗಿದೆ! ಈ ತೊಂದರೆಯಲ್ಲಿ ಸಿಕ್ಕಿಬಿದ್ದವರು ಮಾತ್ರ ಬಲ್ಲರು ಈ ಪರೀಕ್ಷೆಯ ಗ್ರಹಚಾರವನ್ನು! ರಾತ್ರಿ ನಿದ್ರೆಯಿಲ್ಲದೆ, ಸರಿಯಾಗಿ ಅನ್ನವನ್ನು ಸಹ ತಿನ್ನದೆ, ಒಂದು ವರ್ಷಕಾಲ ಕಲಿತಿರುವ ಪಾಠಗಳನ್ನು ರಾತ್ರಿ ದೀಪದ ಬೆಳಕಿನ ಮುಂದೆ ಕುಳಿತು ಓದಿ ಜೀರ್ಣಿಸಲು ಪ್ರಯತ್ನಿಸುತ್ತಿರುವ ಬಡವಿದ್ಯಾರ್ಥಿಯ ಚಿತ್ರವನ್ನು ಮರೆಯಲು ಯಾರಿಗೂ ಶಕ್ಯವಿಲ್ಲ. ಅದರಂತೆಯೇ ಪರೀಕ್ಷೆಯ ಹಾಲಿನಲ್ಲಿ ಪ್ರಶ್ನೆಗಳ ಕಾಗದವು

ಹಸ್ತಗತವಾದೊಡನೆಯೇ, ಕೆಲದಿನ ರಾತ್ರಿ ಓದಿ ಜೀರ್ಣಿಸಿಕೊಂಡಿದ್ದ ವಿಷಯಗಳನ್ನು ಉತ್ತರಗಳ ರೂಪವಾಗಿ ಕಾರುತ್ತಿರುವ ದೃಶ್ಯವಾದರೂ ಸಂಸಾರದ ಜಂಜಾಟದಲ್ಲಿ ಸಿಲುಕಿ ಬಳಲಿ ಬೇಸತ್ತಿರುವ ನನ್ನಲ್ಲಿಯೂ (ಈಗ ನಾನು ಹಿಂದಿನ ಕಾಲದಲ್ಲಿದ್ದ-ಬಾಲ್ಯದಲ್ಲಿದ್ದ ಶೀನುವಲ್ಲ!) ನಗುವು ಜನಿಸುವಂತೆ ಮಾಡುತ್ತಿರುವುದು. ಮೂರು ನಾಲ್ಕು ತಾಸುಗಳ ವರೆಗೆ ಮೆದುಳಿನಲ್ಲಿ ಒಂದು ಭಯಂಕರವಾದ ಕುಸ್ತಿಯೇ ನಡೆಯುತ್ತಿರುವುದೆಂದು ಹೇಳಬಹುದು. ಉತ್ತರಗಳನ್ನು ಬರೆದು ಅಧ್ಯಾಪಕರ ಕರಗಳಲ್ಲಿ ನೀಡಿ, ತನ್ನ ಮೆದುಳಿನ ಗರಡೀಸಾಧನೆಯಿಂದ ಬಳಲಿ ಬೆಂಡಾಗಿ ಹಿಂದಿರುಗಿ ಬರುವ ಬಡ ವಿದ್ಯಾರ್ಥಿಯ ಚಿತ್ರವು ಹಗಲೆಲ್ಲ ಮೂಟೆಗಳನ್ನು ಹೊತ್ತು ಬೆಂಡಾದ ಅಗಸನ ಕತ್ತೆಯ ಸ್ವರೂಪವನ್ನು ನನ್ನ ಮನಸ್ಸಿನಲ್ಲಿ ಜ್ಞಾಪಕಕ್ಕೆ ತರುತ್ತಲಿರುವುದು. ಇಷ್ಟಾದರೂ ವಿದ್ಯಾರ್ಥಿಯ ಮನಸ್ಸಿಗೆ ಶಾಂತಿಯಿಲ್ಲ; ಮನೆಗೆ ಹಿಂದಿರುಗಿ ಬಂದು ತನ್ನ ಪಠ್ಯಪುಸ್ತಕಗಳನ್ನು ಬಿಚ್ಚಿ ತಾನು ಬರೆದಿರುವ ಉತ್ತರಗಳು ಸರಿಯೇ ಎಂದು ಪರಿಶೋಧಿಸುವವರೆಗೆ ಅವನ ಮನಸ್ಸು ಸಂದೇಹಗಳ ಒಂದು ಕದನಭೂಮಿಯಾಗಿ ಪರಿಣಮಿಸುವುದು. ಬರೆದಿದ್ದ ಉತ್ತರಗಳು ಸರಿಯಾಗಿದ್ದರೆ ಅವನ ಪೂರ್ವಾರ್ಜಿತ ಸುಕೃತ! ಇಲ್ಲದಿದ್ದರೆ ಕಣ್ಣೀರಿನಿಂದ ತನ್ನ ಮುಖವನ್ನು ಪ್ರಕ್ಷಾಲಿಸುವುದೇ ಅವನ ಗತಿಯು!

ಒಂದು ವರ್ಷಕಾಲವು ವ್ಯರ್ಥವಾಯಿತು; ಈ ವರ್ಷವನ್ನಾದರೂ ವೃಥಾ ವ್ಯಯಗೊಳಿಸಬಾರದೆಂದು ಸಂಕಲ್ಪಿಸಿ, ಅತ್ತಿಗೆಯ ಉಪದೇಶದಂತೆ ನಾನು ಹಿಂದೆ ಹೇಳಿದಂತೆ ಅತ್ಯಂತ ಶ್ರದ್ಧಾಭರಿತನಾಗಿ ಪಾಠಗಳನ್ನು ಕಲಿಯುತ್ತಲಿದ್ದೆನು. ಸುಬ್ಬುವನ್ನು-ನನ್ನ ಜೀವನದ ಗೆಳೆಯನನ್ನು-ಸಹ ನಾನು ನೋಡುವುದಕ್ಕೆ ಹೋಗುವುದು ಅಪರೂಪವಾಗಿದ್ದಿತು. ನನ್ನಂತೆಯೇ ಅವನು ಈ ಸಲವಾದರೂ ತನ್ನ ಹಣೇಬರಹವನ್ನು ಚೆನ್ನಾಗಿ ಮಾಡಿಕೊಳ್ಳಬೇಕೆಂದು ಬಯಸಿದ್ದನು. (ಎರಡು ವರ್ಷ ಅವನು III ಫಾರಂ ಜನರಲ್ ಪರೀಕ್ಷೆಯಲ್ಲಿ ಪರಾಜಯವನ್ನು ಪಡೆದಿದ್ದಾನೆ. ಈಗ ನಾವಿಬ್ಬರೂ ಸಹಪಾಠಿಗಳಾಗಿರುವೆವು.) ಅವನೂ ಅಧ್ಯಯನದಲ್ಲಿ ನಿರತನಾಗಿದ್ದುದರಿಂದ ನಮ್ಮಲ್ಲಿಗೆ ಬರುವುದು ಅಪರೂಪವಾಗಿದ್ದಿತು.

ಅದೊಂದು ದಿನ ಪರೀಕ್ಷೆಗೆಂದು ನನ್ನ ವಸ್ತ್ರಗಳನ್ನು ಧರಿಸಿಕೊಂಡು ನಾನು ಶಾಲೆಗೆ ಹೊರಡಲು ಬೇಕಾದ ಸನ್ನಾಹಗಳನ್ನು ಮಾಡುತ್ತಲಿದ್ದೆನು. ಆಗ ಹೊರಗಿನಿಂದ:- "ಶೀನೂ" ಎಂಬುದಾಗಿ ಕೂಗುವ ಸಪ್ಪಳವು ಕೇಳಿಸಿತು. ಯಾರೋ ಕ್ಲಾಸಿನ ಹುಡುಗರಿರಬಹುದೆಂದು ನಾನು ಅಷ್ಟು ಗಮನಿಸಲಿಲ್ಲ ಎರಡು ನಿಮಿಷಗಳು ಗತಿಸುವುದರೊಳಗಾಗಿ ನನ್ನ ಕೋಣೆಯ ಕದಗಳ ಮುಂದೆ ಸುಬ್ಬುವಿನ ರೂಪು ಪ್ರತ್ಯಕ್ಷವಾಯಿತು. ಅವನು ನನ್ನ ಅತ್ತಿಗೆಗೂ ಏಕೆ, ಎಲ್ಲರಿಗೂ ಅಚ್ಚು-ಮೆಚ್ಚಿಗೆಯವನಾಗಿದ್ದುದರಿಂದ ಅವನು ನಮ್ಮ ಮನೆಯಲ್ಲಿ ತನ್ನ ಇಷ್ಟದಂತೆ ವರ್ತಿಸಲು ಸರ್ವಸ್ವಾತಂತ್ರ್ಯವು ಅವನಿಗಿದ್ದಿತು. ಸುಬ್ಬುವೆಂದರೆ, ನಮ್ಮ ಕುಟುಂಬದಲ್ಲಿ ಒಬ್ಬನು; ಅಷ್ಟು ಸಲಿಗೆಯಲ್ಲಿ ನಮ್ಮೆಲ್ಲರೊಡನೆ ಅವನು ವರ್ತಿಸುತ್ತಲಿದ್ದನು.

"ಏನಯ್ಯಾ, ಮಹಾರಾಯ! ಇನ್ನೂ ಶಾಲೆಗೆ ಹೊರಡಲಿಕ್ಕಾಗಲಿಲ್ಲವೇ?" ಎಂದನು ಸುಬ್ಬು.

"ಇಲ್ಲಪ್ಪಾ, ಹೊರಡುತ್ತಲಿದ್ದೇನೆ. ಏನು, ಅಷ್ಟು ಅವಸರ?"

"ಈ ದಿನ ಯಾವುದಯ್ಯಾ ಪರೀಕ್ಷೆ?"

"ಇತಿಹಾಸ" ಎಂದು ನಾನು ನುಡಿದೆನು. ಹಿಂದಿನ ರಾತ್ರಿ ನಾನು ಓದಿದ್ದು ಇತಿಹಾಸವನ್ನೇ ಆಗಿದ್ದಿತು. ಆ ವಿಷಯವನ್ನು ಕುರಿತು ಆವಶ್ಯವಿರುವ ವ್ಯಾಯಾಮ ಗಳನ್ನು ನನ್ನ ಮೆದುಳಿಗೆ ನಾನು ನೀಡಿದ್ದೆನು.

"ಅಲ್ಲ ಕಣೋ, ಭೂಮಿಶಾಸ್ತ್ರ!" ಎಂದು ಸುಬ್ಬವು ನುಡಿಯುವಾಗಲಂತೂ ನನ್ನ ಎದೆಯು ಒಡೆದು ಹೋಯಿತೆಂದೇ ಹೇಳಬಹುದು. ಪರೀಕ್ಷೆಯ ವಿಷಯವು ಆ ದಿನ ಭೂಮಿಶಾಸ್ತ್ರವಾದರೆ ನನ್ನ ಗತಿಯೇನು? ಅಮೇರಿಕದ ಸರೋವರಗಳು, ಆಫ್ರಿಕದ ಕಾಡುಗಳು, ಜಾಪಾನಿನ ಜ್ವಾಲಾಮುಖಿಗಳು, ಚೈನಾದ ನದಿಗಳು, ಉತ್ತರ ಧ್ರುವದಲ್ಲಿರುವ ಎಸ್ಕಿಮೋ ಜನರು, ಆಸ್ಟ್ರೇಲಿಯದ ಮರುಭೂಮಿಗಳು ಇವುಗಳನ್ನು ಕುರಿತು ಒಂದು ಚೂರು ಜ್ಞಾನವು ಸಹಾ ನನ್ನ ಮೆದುಳಿನಲ್ಲಿರಲಿಲ್ಲ. ಭೂಮಿಶಾಸ್ತ್ರ ವೆಂದರೆ, 25000 ಮೈಲುಗಳ ಸುತ್ತಳತೆಯಿರುವ ಈ ವಿಶ್ವವನ್ನೇ ತಲೆಯೊಳಗೆ ಅಡಗಿಸಿಕೊಳ್ಳಬೇಕಾಗಿದೆ. ಅದೂ ಸಾಲದು; ನದಿಗಳು, ಸರೋವರಗಳು, ಸಾಗರ ಗಳು, ಭಾಷೆಗಳು, ಬೆಳೆಗಳು, ಪ್ರವಾಹಗಳು, ಹಿಮಗಡ್ಡೆಗಳು, ಐಸೋಥರ್ಮ್ಸ್, ಹಿಪ್ಪೋ, ಪೊಟ್ಟಿಮಸ್ಸ ಇನ್ನೂ ಇನ್ನೂ ಹೇಳಲಿಕ್ಕೂ ವಿವರಿಸಲಿಕ್ಕೂ ಶಕ್ಯವಲ್ಲದ ಅದೆಷ್ಟೋ ಹಾಳು ಸಂಗತಿಗಳು ಮೆದುಳಿನೊಳಗಿರಬೇಕು! ಭೂಮಿಶಾಸ್ತ್ರವೆಂದರೆ ಕಲಿಸು ಮೇಲೋಗರವಿದ್ದ ಹಾಗೆ! ಏನು ಮಾಡಲಿ?

"ಅದೇನೇ ಆಗಲಿ; ಇತಿಹಾಸ ಕಾಣಯ್ಯ!" ಎಂದು ಹೊಸ ಆಶೆಯಿಂದ ನಾನು ನುಡಿದೆನು.

"ಶಾಲೆಗೆ ಹೊತ್ತಾಗುವದು ಬೇಗ; ತೆರಳೋಣ" ಎಂದನು ಅವನು.

ಇಷ್ಟರಲ್ಲಿಯೇ ಹೊರಗಿದ್ದ ಅತ್ತಿಗೆಯು ನನ್ನ ಕೋಣೆಯೊಳಗೆ ಪ್ರವೇಶಿಸಿದಳು. ಅವಳು ಸುಬ್ಬುವನ್ನು ನೋಡುತ್ತ, "ಏನೋ ಸುಬ್ಬು, ನಿನ್ನ ಕಾಣದೆ ಬಹಳ ದಿನಗ ಳಾದುವಲ್ಲ!" ಎಂದು ನುಡಿದಳು.

"ಏನೂ ಇಲ್ಲ ಅಕ್ಕ! ಪರೀಕ್ಷೆಯ ಗಂಡಾಂತರ!" ಎಂದು ಅವನು ತನ್ನ ನಾಲಿಗೆಯನ್ನು ಕಚ್ಚಿಕೊಂಡು ಹೇಳಿದನು.

"ಈ ವರ್ಷದ ಪರೀಕ್ಷೆಯಲ್ಲಿ ಹೇಗೆ ಮಾಡಿರುವೆ?"

"ಇದುವರೆಗೆ ಚೆನ್ನಾಗಿಯೇ ಮಾಡಿರುವೆನು. ಈ ವರ್ಷ ಪಾಸಾಗುವೆನೆಂಬ ಭರವಸೆಯು ನನ್ನಲ್ಲಿ ತುಂಬಾ ಇದೆ."

"ಚನ್ನಾಗಿ ಮಾಡಪ್ಪಾ. ಎರಡು ವರ್ಷ ಕಾಲವನ್ನು ಅನಾವಶ್ಯವಾಗಿ ವ್ಯಯ ಗೊಳಿಸಿದೆ. ಈ ವರ್ಷವನ್ನಾದರೂ ದುರುಪಯೋಗಪಡಿಸದಿರು." ಎಂದು ವಾತ್ಸಲ್ಯ

ಭರಿತಳಾಗಿ ನನ್ನ ಅತ್ತಿಗೆಯು ನುಡಿದಳು.

"ಅಕ್ಕಾ!" ಎಂದನು ಸುಬ್ಬು

"ಏನು ಸುಬ್ಬು?"

ಸುಬ್ಬುವೆಂದರೆ, ಭೀಮಸೇನ. ಪರಾಕ್ರಮದಲ್ಲಲ್ಲ; ತಿನ್ನುವುದರಲ್ಲಿ! ಅವನಿಗೆ ಏಕ್ಕೋಶನೆಂದೋ ಭೀಮನೆಂದೋ ಹೆಸರಿಟ್ಟರೆ ಚೆನ್ನಾಗುತ್ತಿತ್ತು, ಎಂದು ನನ್ನ ಅಭಿಪ್ರಾಯ! ನಮ್ಮ ಮನೆಗೆ ಬಂದರೆ ಏನನ್ನಾದರೂ ಮುಕ್ಕದೇ ಹಿಂದಿರುಗುವ ಸಂಪ್ರದಾಯವು ಅವನಲ್ಲಿಲ್ಲ

"ತಿಂಡಿಯೇನೂ ಇಲ್ಲವೇ? ಹೊಟ್ಟೆ ಹಸಿಯುತ್ತೆ!'' ಎಂದು ಮೃದು ಮಾತುಗಳಲ್ಲಿ ಅವನು ನುಡಿದನು. ಅತ್ತಿಗೆಯೆಂದರೆ, ಅವನಿಗೆ ಅಷ್ಟು ಸಲಿಗೆ! ಅವನ ನುಡಿಗಳನ್ನಾಸ್ವಾದಿಸಿ, ಅತ್ತಿಗೆಯು ನಗದೆ ಇರಲಿಲ್ಲ.

"ಒಳಗೆ ಬಾರೋ" ಎಂದಳು. ನಾವಿಬ್ಬರು ಅಡಿಗೆ ಕೋಣೆಯೊಳಗೆ ತೆರಳಿದೆವು. ಎರಡು ಗ್ಲಾಸುಗಳಲ್ಲಿ ಕಾಫಿ, ನಾಲ್ಕೆಂಟು ದೋಸೆಗಳು ಇವುಗಳಿಂದ ನಮ್ಮ ಉದರ ನೌಕೆಗಳನ್ನು ಭರ್ತಿ ಮಾಡಿದೆವು. ಗಜಾನನ ಹಾಗೆ ತಿಂಡಿಯನ್ನು ಮುಕ್ಕುತ್ತಿರುವ ನಮ್ಮೊಡನೆ ಅತ್ತಿಗೆಯು ನಗುತ್ತಾ "ಬಕಾಸುರರೇ ನೀವು!'' ಎಂದು ನುಡಿದಳು.

ಶಾಲೆಗೆ ತೆರಳಿದೆವು. ಸುಬ್ಬು ತಿಳಿಸಿದಂತೆ ಆ ದಿನದ ಪರೀಕ್ಷೆಯು ಭೂಮಿಶಾಸ್ತ್ರವಾಗಿರಲಿಲ್ಲ. ಇತಿಹಾಸವಾಗಿದ್ದಿತು. ನಾನು ಆ ದಿನದ ಪರೀಕ್ಷೆಯಲ್ಲಿ ಸೊಗಸಾಗಿಯೇ ಮಾಡಿದೆನೆಂದು ಹೇಳಬಹುದು. ಪರೀಕ್ಷೆಯ ಹಾಲಿನಿಂದ ಹೊರಬೀಳುವ ವೇಳೆಯಲ್ಲಿ ಸುಬ್ಬುವನ್ನು ಕಂಡೆನು. ಅವನ ಮುಖವು ಬಿಳುಪೇರಿ, ಸುಟ್ಟ ಹಪ್ಪಳದ ಹಾಗಾಗಿದ್ದಿತು. ಆ ದಿನದ ಪರೀಕ್ಷೆಯು ಭೂಮಿಶಾಸ್ತ್ರವೆಂದು ತಿಳಿದು ಅವನು ಇತಿಹಾಸವನ್ನು ಓದಿಕೊಂಡು ಬಂದಿರಲಿಲ್ಲ. ಆ ಮಹಾರಾಯನು ಚರಿತ್ರೆಯ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಬರೆದಿರಲಿಲ್ಲವೆಂಬುದನ್ನು ಇಲ್ಲಿ ವಿವರಿಸಬೇಕಾದುದಿಲ್ಲ.

ಒಂದು ತಿಂಗಳ ನಂತರ ಪರೀಕ್ಷೆಯ ಫಲಿತಾಂತವು ಹೊರಬಿದ್ದಿತು. ಈ ಸಾರೆ ಡಿಸ್ಟ್ರಿಕ್ಟಿನಲ್ಲಿ ನಾನೇ ಫಸ್ಟ್ ಬಂದಿದ್ದೆನು. ಈ ವಾರ್ತೆಯನ್ನು ಅತ್ತಿಗೆಗೆ ತಿಳಿಸಲು ನಾನು ಅತ್ಯಾಹ್ಲಾದಭರಿತನಾಗಿ ಮನೆಯ ಕಡೆಗೆ ಓಡಿದೆನು.

"ಏನು? ಶೀನೂ, ಅದೇನೋ ಜೂಜಿನ ಕುದುರೆಯಂತೆ-ಅಷ್ಟು ಉತ್ಸಾಹಭರಿತನಾಗಿ-ಬರುತ್ತಿರುವೆ?'' ಎಂದು ಅವಳು ಆಶ್ಚರ್ಯಚಕಿತಳಾಗಿ ಪ್ರಶ್ನಿಸಿದಳು.

"ಒಂದು ಸಂತೋಷವಾರ್ತೆಯೊಡನೆ ನಾನು ಬಂದಿರುವೆನು.''

"ಏನು, ಹೇಳಬಾರದೆ?''

"ನೀನೇ ಊಹಿಸು ನೋಡೋಣ.''

"ನನಗೆ ತಿಳಿಯಲಿಲ್ಲ."

"ಪರೀಕ್ಷೆಯಲ್ಲಿ ನಾನು ಫಸ್ಟ್...........!''

ಅನಂತರ ಆ ಹರ್ಷದಿಂದ ನನ್ನ ಕಂಠದಿಂದ ಸ್ವರವು ಹೊರಬೀಳಲಿಲ್ಲ. ಈ

ವಾರ್ತೆಯನ್ನು ಕೇಳಿ ಅತ್ತಿಗೆಯಾದರೋ ಬಹು ಸಂತೋಷಭರಿತಳಾದಳು. ಅವಳು ವಾತ್ಸಲ್ಯದಿಂದ ನನ್ನನ್ನು ಮುದ್ದಿಟ್ಟಳು. ಅವಳಿಗೆ ಸುಬ್ಬುವಿನ ನೆನಪು ಆಗದೇ ಇರಲಿಲ್ಲ.

"ಸುಬ್ಬು?" ಎಂದಳವಳು.

"ಪಾಸಾಗಿರುವನು" ಎಂದು ನಾನು ನುಡಿದೆನು.

---

## [೧೦]

ಮೂರು ವರ್ಷಗಳು ಗಮಿಸಿದುವು. ನಾನು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆ ಯಲ್ಲಿ ಉತ್ತೀರ್ಣನಾದೆನು. ಸರಕಾರದವರಿಂದ ೧೫ ರೂಪಾಯಿಗಳ ವಿದ್ಯಾರ್ಥಿ ವೇತನವು ನನಗೆ ಲಭಿಸಿತು. ಪ್ರೌಢವಿದ್ಯಾಸಂಪನ್ನನಾಗಲು ನಾನು ಅಣ್ಣನ ಸಲಹೆ ಯಂತೆ ಮಂಗಳೂರಿಗೆ ತೆರಳಲು ನಿರ್ಧರಿಸಿದೆನು.

ನಮ್ಮ ಗೃಹವನ್ನು-ಆ ಪುಟ್ಟ ಪ್ರಪಂಚವನ್ನು-ಪರಿತ್ಯಜಿಸಿ, ವಿಶಾಲವಾದ ಜಗತ್ತಿ ನಲ್ಲಿ ನಾನು ಕಾಲಿಡತೊಡಗಿದ ಮೆಟ್ಟಲುಗಳಲ್ಲಿ ಇದು ಮೊದಲನೆಯದಾಗಿದೆ. ಹುಟ್ಟಿ, ಬೆಳೆದು, ನಲಿದಾಡಿ, ಬಾಲ್ಯವನ್ನು ಕಳೆದ ನಮ್ಮ ಮನೆಯನ್ನು ಪರಿತ್ಯಜಿಸುವಾಗ, ನನ್ನ ಎದೆಯಲ್ಲಿ ವಿಷಾದವು ಸಮುದ್ಭವವಾಗದೆ ಇರಲಿಲ್ಲ. ತಂದೆಗಿಂತಲೂ ವಾತ್ಸಲ್ಯಭರಿತನಾಗಿರುವ ಅಣ್ಣ, ಸ್ವಂತ ಅಣ್ಣನಂತೆ ಪ್ರೀತಿಸಿ, ಒಲುವಿನ ಸಿಹಿ ಹಾಲನ್ನು ನೀಡುತ್ತಿರುವ ಅತ್ತಿಗೆ, ಚಿಕ್ಕಂದಿನಲ್ಲಿ ಎತ್ತಿ-ಮುದ್ದಾಡಿ ಪೋಷಿಸಿದ "ಅತ್ತೆ" ಇವರನೆಲ್ಲ ತ್ಯಜಿಸಿ ಹೊರಡುವ ವೇಳೆಯಲ್ಲಿ ನನ್ನ ನೇತ್ರಗಳಿಂದ ಕಂಬ ನಿಯು ಉಕ್ಕಿಬಂದಿತು.

ಆಗ ನನಗೆ ೧೮ ವರ್ಷ ಪ್ರಾಯವಿರಬಹುದು; ತಾರುಣ್ಯದಲ್ಲಿ ಕಾಲಿಟ್ಟಿದ್ದೆನು; ಆದರೆ ಲೋಕಾನುಭವವು ನನಗೆ ತಿಲಾಂಶದಷ್ಟೂ ಲಭಿಸಿರಲಿಲ್ಲ. ನಮ್ಮ ಪುಟ್ಟ ಸಂಸಾರವೇ ಜಗತ್ತೆಂದು ಭಾವಿಸಿದ್ದೆನು. ಇದುವರೆಗೆ ಈ ಪುಟ್ಟ ಕುಟುಂಬಸಾಗರ ದಲ್ಲಿ ಏಳುತ್ತಿದ್ದ ಕಲಾಪಗಳ ತರಂಗಗಳು ಹಲವು ಸಂದರ್ಭಗಳಲ್ಲಿ ಹರ್ಷವನ್ನೂ, ಇತರ ಕೆಲವು ವೇಳೆಯಲ್ಲಿ ವಿಷಾದವನ್ನೂ ನನಗೆ ಕೊಡುತ್ತಲಿದ್ದುವು. ನಮ್ಮ ಕುಟುಂಬದ ಅವಸ್ಥೆಯೇ ಜಗತ್ತಿನದೂ ಆಗಿದೆ ಎಂಬುದಾಗಿದ್ದಿತು ನನ್ನ ಆ ಕಾಲದ ಭಾವನೆಯು! ಶಾಲಾ ಪುಸ್ತಕಗಳಿಂದಲೂ, ಇತರ ಗ್ರಂಥಗಳಿಂದಲೂ ನನ್ನ ಮೆದುಳಿ ನಲ್ಲಿ ಸಂಗ್ರಹಿಸಿಟ್ಟಿದ್ದ ಜ್ಞಾನಕೋಶವೇ ಆ ಲೋಕಾನುಭವವೆಂಬ ಮಹದ್ಗ್ರಂಥದ ಒಂದು ವಿಷಯಾನುಕ್ರಮಣಿಕೆಯಾಗಿದ್ದಿತು. ಶಾಲೆಯಲ್ಲಿ ನನ್ನ ಅಧ್ಯಾಪಕರು ಈ ಮೆದುಳಿನಲ್ಲಿ ತುರುಕಿದ್ದ ವಿಚಾರಗಳೇ ಪರದೇಶಗಮನಕ್ಕಿರುವ ನನ್ನ ಮಾರ್ಗದರ್ಶ ಕರು! ಇದೂ ಅಲ್ಲದೆ, ಇದಕ್ಕಿಂತ ಮೊದಲು ನಾನು ನಮ್ಮ ಜಿಲ್ಲೆಯನ್ನು ತ್ಯಜಿಸಿ ಇತರ ಪ್ರಾಂತಗಳಿಗೆ ಗಮಿಸಿರಲಿಲ್ಲ.

ಪ್ರಯಾಣಕ್ಕಿರುವ ಸನ್ನದ್ಧತೆಗಳನ್ನು ಒದಗಿಸಿಕೊಂಡೆನು. ಪೆಟ್ಟಿಗೆ, ಹಾಸಿಗೆ, ಧರಿಸಲು ಅವಶ್ಯವಿರುವ ವಸ್ತ್ರಗಳು ಇವುಗಳನ್ನು ಅತ್ತಿಗೆಯ ಸಹಾಯದೊಡನೆ ಪೇಕ್ ಮಾಡಿದೆನು. ರಾಮುವು ಅತ್ಯಾಶ್ಚರ್ಯಭರಿತನಾಗಿ ಕೈತಟ್ಟಿ ಕುಣಿದು, ''ಚಿಗಪ್ಪಾ, ಎಲ್ಲಿ ಹೋಗ್ತಿ?'' ಎಂದು ಕಿರಚುತ್ತಿದನು. ನಾನು ಕೆಲವು ಪುಸ್ತಕಗಳನ್ನು ತೆಗೆದುಕೊಂಡು ಹೋಗಲು ನಿರ್ಧರಿಸಿದ್ದೆನು; ಆದರೆ ನಾನು ತೆಗೆದುಕೊಂಡು ಹೋಗಬೇಕೆಂದು ಎಂಗಡಿಸಿಟ್ಟ ಪುಸ್ತಕಗಳನ್ನು ಅವನು ತೆಗೆದು ನೋಡುತ್ತ, ಪುಸ್ತಕಗಳಲ್ಲಿ ಚಿತ್ರಗಳಿದ್ದರೆ ''ರೂಪು, ರೂಪು'' ಎಂದು ಒದರುತ್ತ ಅವುಗಳನ್ನು ಪುಸ್ತಕದಿಂದ ಕೀಳಲು ಪ್ರಯತ್ನಿಸುತ್ತಲಿದ್ದನು

ಸಾಮಾನುಗಳನ್ನು ಪೇಕ್ ಮಾಡಿದುದಾಯಿತು. ನನ್ನ ಅತ್ಯಂತ ಪ್ರೀತಿಯ ಪುಸ್ತಕವಾದ ಗಳಗನಾಥರ ''ಮಾಧವಕರುಣವಿಲಾಸ''ವನ್ನು ನಾನು ತೆಗೆದುಕೊಂಡು ಹೋಗಲು ನಿರ್ಧರಿಸಿದ್ದೆನು. ಆ ಪುಸ್ತಕವನ್ನು ನಾನು ಅದೆಷ್ಟೋ ಬಾರಿ ಓದಿರುವೆನು; ಆದರೆ ಪುನಃ ಪುನಃ ಯಾವ ಬೇಸರವೂ ಇಲ್ಲದೆ ಅದನ್ನು ನಾನು ಓದಬಲ್ಲೆನು. ನಾನು ಏಕಾಂಗಿಯಾಗಿದ್ದು ಯಾವ ಕೆಲಸಗಳೂ ಇಲ್ಲದೇ ಇರುವಾಗ, ಅದು ನನ್ನ ದೊಡ್ಡ ಬಂಧುವು! ಕರ್ನಾಟಕ ಸಿಂಹಾಸನಸ್ಥಾಪನಾಚಾರ್ಯರಾದ ಮಾಧವಾಚಾರ್ಯರ ಉಪದೇಶ ಭಾಗಗಳನ್ನು ಹಲವು ಸಾರೆ ಓದುತ್ತ ಆಧ್ಯಾತ್ಮಿಕ ವಿಚಾರಗಳ ಕಡಲಿನಲ್ಲಿ ನನ್ನ ಜೀವವೆಂಬ ದೋಣಿಯು ಸಂಚರಿಸುವುದು. ಎಲ್ಲ ಸಾಮಾನುಗಳನ್ನು ಪೇಕ್ ಮಾಡಿದನಂತರ ಈ ಗ್ರಂಥವನ್ನು ಹುಡುಕಿದೆನು; ಆದರೆ ಅದು ಸಿಗಲಿಲ್ಲ.

ನಾನು ಮನೆಯೊಳಗೆಲ್ಲ ಹುಡುಕಿದರೂ ಯಾವ ಪ್ರಯೋಜನವಾಗಲಿಲ್ಲ; ಅಂತ್ಯದಲ್ಲಿ ಅಡಿಗೆಯ ಕೋಣೆಯೊಳಗೆ ಗಮಿಸಿದೆನು. ನಮ್ಮ ರಾಮುವು ''ಮಾಧವಕರುಣಾವಿಲಾಸ''ವನ್ನು ಒಲೆಯೊಳಗೆ ಹಾಕಿ ಪುಸ್ತಕವು ಬುಗ್ಗೆಂದು ಉರಿಯುತ್ತಿರುವದನ್ನು ಕಂಡು ಕೈತಟ್ಟಿ ಕುಣಿಯುತ್ತಲಿದ್ದನು ಅವನ ಆಗಲಿನ ಆ ಆಮೋದವು ಲಂಕಾದಹನದ ನಂತರ ಮಾರುತಿಗೂ ಅಷ್ಟು ಹರ್ಷವಾಗಿರಲಿಲ್ಲವೆಂಬ ವಿಚಾರವನ್ನು ಪ್ರೇಕ್ಷಕನ ಮನಸ್ಸಿನಲ್ಲಿ ಹುಟ್ಟಿಸದೆ ಇರದು. ತಾನೊಂದು ಮಹತ್ಕಾರ್ಯವನ್ನು ಗೈದವನ ಹಾಗೆ ನಟಿಸಿ, ಅವನು ಒಲೆಯ ಕಡೆಗೆ ತನ್ನ ಬೆರಳು ತೋರಿಸುತ್ತ: "ಚಿಗಪ್ಪಾ ಪುಚ್ಚುಗ ಉರೀತೆ'' ಎಂದು ನುಡಿದನು.

ಅವನ ಈ ಕೃತ್ಯವನ್ನು ಅವಲೋಕಿಸಿ ನನಗೆ ಅಳುವು ಬಂದು ಹೋಯಿತು ಮೂರು ರೂಪಾಯಿಗಳಿಗಿಂತ ಹೆಚ್ಚು ಬೆಲೆ ಬಾಳುವ ಪುಸ್ತಕ-ನನ್ನ ಜೀವನದ ಗ್ರಂಥ-ಅಗ್ನಿದೇವನಿಗೆ ಉಪಾಹಾರವಾಗಿ ಹೋಗಿದೆ! ಈ ಹುಡುಗನ ಈ ಕೃತ್ಯಕ್ಕೆ ಏನು ಮಾಡಬಹುದು? ತಿಳಿವಿಲ್ಲವೆಂಬ ಕಾರಣವು ಅವನ ರಕ್ಷಣೆಗಿದೆ!

''ರಾಮೂ, ಪುಸ್ತಕವನ್ನು ಸುಟ್ಟುಬಿಟ್ಟೆಯಲ್ಲ!'' ಎಂದು ಕುಂಠಿತ ಮನಸ್ಕನಾಗಿ ನಾನು ನುಡಿದೆನು.

"ಪುಚ್ಚುಗ ಉರೀತೆ!" ಎಂದು ಅವನು ತನ್ನ ತೊದಲ್ನುಡಿಗಳನ್ನು ಹೊರ ಚೆಲ್ಲಿದನು.

ಹೆಚ್ಚಿಗೆ ನುಡಿದು ಪ್ರಯೋಜನವೇನು? ಪುಸ್ತಕವು ಬೆಂಕಿಪಾಲಾಯಿತು!

ನಾನು ಮರುದಿನದ ಬೆಳಗಿನ ಬಸ್ಸಿನಲ್ಲಿ ಮಂಗಳೂರಿಗೆ ಪ್ರಯಾಣ ಮಾಡಿದೆನು. ಬಸ್ಸು ಸ್ಟೇಂಡಿಗೆ ಅಣ್ಣಾ, ಅತ್ತಿಗೆ, ರಾಮು ಇವರೆಲ್ಲರೂ ಬಂದಿದ್ದರು. ಅಣ್ಣನು ತನ್ನ ಕ್ಲಾಸರೂಮಿನಲ್ಲಿ ಮಾಡುವದಕ್ಕಿಂತಲೂ ಮಿಗಿಲಾದ ಒಂದು ಉಪನ್ಯಾಸವನ್ನು ಬಸ್‌ಸ್ಟೇಂಡಿನಲ್ಲಿ ನನ್ನೊಡನೆ ಉಪದೇಶರೂಪೇಣ ಪ್ರಾರಂಭಿಸಿದನು. ಅದಕ್ಕೆ ಕಾರಣವು ನನ್ನಮೇಲಿನ ಅಪಾರವಾದ ಪ್ರೇಮವಾಗಿದೆ, ಎಂಬುದನ್ನು ನಾನು ಬಲ್ಲೆನು. ಅವನೆದೆಯಲ್ಲಿ ನನಗೆ ಎಷ್ಟು ವಿಶಾಲವಾದ ಪ್ರದೇಶವನ್ನು ನೀಡಿರುವನೆಂಬುದನ್ನು ನಾನೆಂದಿಗೂ ಮರೆಯಲಾರೆನು.

"ಶೀನೂ, ಈಗ ನೀನು ದೂರದ ಊರಿಗೆ ತೆರಳುತ್ತಿರುವೆ. ನನ್ನ ಹಾಗೆ ಉಪದೇಶಗಳನ್ನು ನೀಡಿ ಸರಿಯಾದ ದಾರಿಯನ್ನು ತೋರಿಸುವವರು ಅಲ್ಲಿ ಯಾರೂ ಸಿಗರು ವ್ಯಾಸಂಗದಲ್ಲಿ ಹೆಚ್ಚು ನಿಷ್ಠೆಯನ್ನು ಇಡತಕ್ಕದ್ದು. ತುಂಟತನವು ಬಾಲ್ಯದಿಂದಲೇ ನಿನಗೆ ಇರುವ ಒಂದು ಹಾಳು ಸ್ವಭಾವವಾಗಿದೆ. ಆ ಹಾಳು ಕುದುರೆಯ ಲಗಾಮನ್ನು ನೀನು ಸರಿಯಾಗಿ ಹಿಡಿದು ನಿಯಂತ್ರಿಸದಿದ್ದರೆ, ಅಂತ್ಯದಲ್ಲಿ ಅನರ್ಥವಾದೀತು! ನಮ್ಮ ತಂದೆಯವರ ಪವಿತ್ರಾತ್ಮಕ್ಕೆ ನೋವಾಗುವ ಯಾವ ಪ್ರಯತ್ನಗಳಲ್ಲಿಯೂ ಉದ್ಯುಕ್ತನಾಗದಿರು!" ಎಂದು ಅವನ ಹೃದಯದ ಅಂತರಾಳದಿಂದ ಹೊರಸೂಸಿದ ಉಪದೇಶಗಳ ಪಿಯೂಷವನ್ನು ನಾನು ಹೇಗೆ ತಾನೇ ವಿಸ್ಮರಿಸಲಿ?

"ಅಣ್ಣಾ, ನೀನು ಚಿಂತಿಸಬೇಡ; ನನ್ನ ಮಾತುಗಳಲ್ಲಿ ನಂಬಿಕೆಯನ್ನಿಡು. ನೀನು ನುಡಿದ ರೀತಿಯಲ್ಲಿ ವರ್ತಿಸುವೆನು." ಎಂದು ಹೇಳಿ, ನಾನು ಅವನ ಚರಣದಾವರೆಗಳಲ್ಲಿ ನಮಸ್ಕರಿಸಿದೆನು. ಆಗ ನನ್ನ ನೇತ್ರಗಳಲ್ಲಿ ಬಾಷ್ಪಕಣಗಳು ತುಂಬಿದ್ದುವು.

"ಶೀನೂ, ಹೋಗಿ ಬಾ. ಎಲ್ಲ ಕಾರ್ಯಗಳೂ ಮಂಗಳವಾಗಿ ನಡೆಯಲಿ! ಆಗಾಗ ಕಾಗದಗಳನ್ನು ಬರೆಯುತ್ತಿರು!" ಎಂದು ಅತ್ತಿಗೆಯು, ನನ್ನ ಪ್ರೇಮದ ಅತ್ತಿಗೆಯು ಕಂಬನಿಯುಕ್ತ ನೇತ್ರಗಳಿಂದ ನುಡಿದಳು. ಅವಳ ಚರಣಗಳಿಗೂ ನಾನು ನಮಿಸಿದೆನು.

"ಶೀನೂ, ನನಗೇಕೆ ಈ ನಮಸ್ಕಾರ! ಆ ಗೌರವವು ದೊಡ್ಡವರಿಗಿರಲಿ!" ಎಂದಳು ಅವಳು.

"ಅತ್ತಿಗೆ, ನೀನು ನನಗಿಂತ ಹಿರಿಯಳಲ್ಲವೇ? ತಾಯಿಯನ್ನು ನೋಡಿ ಆಕೆಯ ಹಸ್ತಗಳಿಂದ ಲಾಲನೆ-ಪಾಲನೆಗಳನ್ನು ಅನುಭವಿಸುವ ಭಾಗ್ಯವನ್ನು ವಿಧಾತನು ನನಗೆ ನೀಡಲಿಲ್ಲ; ಆದರೆ ತಾಯಿಗಿಂತ ಹೆಚ್ಚಾದ ನೀನು ನನಗೆ ಲಭಿಸಿರುವೆ! ನೀನೇ ನನ್ನ ಜನನಿ! ನನ್ನನ್ನು ರಕ್ಷಿಸಿ-ಪೋಷಿಸಿದವಳು ನೀನು!" ಎಂದು ಹೇಳಿದೆನು ನಾನು.

ಪುಟ್ಟ ರಾಮುವನ್ನು ಹಿಡಿದೆತ್ತಿ ಮುದ್ದಾಡಿದೆನು; ಅವನ ಎಳೆಯ ಕೆನ್ನೆಗಳ

ಮೇಲೆ ಚುಂಬನ ಮುದ್ರೆಗಳನ್ನೊತ್ತಿದೆನು. ರಾಮೂ, "ಹೋಗಿ ಬರುತ್ತೇನೆ" ಎಂದು ನಾನು ನುಡಿದೆನು.

ನಾನಿರುವ ಬಸ್ಸಿನಲ್ಲಿಯೇ ಸುಬ್ಬುವೂ ಪ್ರಯಾಣಕ್ಕೆ ಹೊರಟಿದ್ದನು; ಆದರೆ ಅವನ ಪ್ರವಾಸವು ಬೊಂಬಾಯಿಗಾಗಿದ್ದಿತು. ಅವನ ತಂದೆಯು ಹಣಗಾರ. ಸುಬ್ಬುವು ಬೊಂಬಾಯಿಯಲ್ಲಿಯೋ-ಕಾಶಿಯಲ್ಲಿಯೋ ಹೋಗಿ ಕಲಿಯಲು ಹಣ-ಕಾಸಿನ ಅಡಚಣೆಯಿರುವುದಿಲ್ಲ.

ಬಸ್ಸು ಹೊರಟಿತು. ಅಣ್ಣನೂ ಅತ್ತಿಗೆಯೂ ಕಣ್ಮರೆಯಾದರು. ಕೆಲವು ನಿಮಿಷಗಳಲ್ಲಿಯೇ ನಾನು ಹುಟ್ಟಿ ಬೆಳೆದ ಊರು-ಮಡಿಕೇರಿ-ನನ್ನ ದೃಷ್ಟಿಪಥದಿಂದ ಮಾಯವಾಯಿತು. ಹೊಸ ಊರುಗಳು ಒಂದೊಂದಾಗಿ ನನಗೆ ದೃಗ್ಗೋಚರವಾಗತೊಡಗಿದವು. ಕಾಡುಗಳು, ನದಿಗಳು, ಗುಡ್ಡಗಳು, ಬೆಟ್ಟಗಳು ಇವುಗಳನ್ನೆಲ್ಲ ಅತಿಕ್ರಮಿಸಿ, ಬಸ್ಸು ಪವನವೇಗದಲ್ಲಿ ಧಾವಿಸುತ್ತಲಿದ್ದಿತು. ಮೈಲುಕಲ್ಲುಗಳು ಒಂದೊಂದಾಗಿ ಹಿಂದೆ ಬೀಳತೊಡಗಿದವು. ಬಸ್ಸನ್ನು ಕಂಡರೂ ಯಾವ ಭಯವಾಗಲೀ ಸಂಕೋಚವಾಗಲೀ ಇಲ್ಲದೆ ಮಾರ್ಗದಲ್ಲಿ ಮಲಗಿರುವ ದನ-ಕರುಗಳು, ಇದಾವ ಭೂತವೆಂದು ವಿಚಿತ್ರ ದೃಷ್ಟಿಯಲ್ಲಿ ವೀಕ್ಷಿಸಿ ಬೊಗಳುತ್ತಿರುವ ಹಳ್ಳಿಯ ಶುನಕಗಳು, ಬಸ್ಸಿನ ಗರ್ಜನೆಯನ್ನು ಆಶ್ರಾವಿಸಿ ಭಯವಿಹ್ವಲರಾಗಿ ಮಾರ್ಗವನ್ನು ತ್ಯಜಿಸುತ್ತಿರುವ ಪುಟ್ಟ ಬಾಲಕರು ಇವೆಲ್ಲವೂ ನನ್ನ ಕಣ್ಣುಗಳ ಮುಂದೆ ಬಿದ್ದು ಇನ್ನೊಂದು ಕ್ಷಣದಲ್ಲಿ ಮಾಯವಾಗಿ ಹೋಗುತ್ತಲಿದ್ದುವು.

ಮನೆ, ಹೂದೋಟ, ಅತ್ತೆ, ಅಣ್ಣ, ಅತ್ತಿಗೆ, ಪುಟ್ಟ ರಾಮು ಇವರನ್ನೆಲ್ಲ ಕುರಿತು ಮನಸ್ಸು ಚಿಂತಾಭರಿತವಾಗಿದ್ದಿತು. ಒಲವಿನ ಅತ್ತಿಗೆಯನ್ನು ತ್ಯಜಿಸಿ ಅನ್ಯ ನಾಡಿನಲ್ಲಿ ಹೇಗೆ ಜೀವಿಸಲಿ? ಎಂಬ ಚಿಂತೆಯು ಎದೆಯಲ್ಲಿ ಕುದಿಯುತ್ತಲಿದ್ದಿತು. ಹೂದೋಟದಲ್ಲಿ ಕುಳಿತು ಸಂಧ್ಯಾಸಮೀರನ ಅಸ್ತಮಾನ ಸೊಬಗನ್ನು ಕಂಡು ನಲಿದಾಡಲು ಅನುಕೂಲವಿಲ್ಲವಲ್ಲ? ಎಂಬ ವಿಚಾರವು ನನ್ನ ಮೆದುಳಿನ ಒಳಗೆ ಪ್ರವೇಶಿಸಿ, ಅಸ್ವಾಸ್ಥ್ಯವನ್ನುಂಟು ಮಾಡದೆ ಇರಲಿಲ್ಲ. ಪುಟ್ಟ ರಾಮುವಿನ ತೊದಲ್ನುಡಿಗಳು ಕರ್ಣಾನಂದವನ್ನು ನೀಡುವುದಕ್ಕೆ ಎಡೆಯಿಲ್ಲವೆಂದು ನೊಂದೆನು.

ಹೊಸ ಊರು, ಕಾಲೇಜ, ಹೊಸ ಜೀವನ ಎಂಬ ಹೊಸ ಆಶೆಗಳ ಉಲ್ಲಾಸದಿಂದ ನನ್ನೆದೆಯು ಹಿಗ್ಗದೆ ಇರಲಿಲ್ಲ. ಬಸ್ಸಿನಲ್ಲಿ ತೆರಳುತ್ತಿರುವಾಗ ಅವುಗಳ ಚಿತ್ರಗಳನ್ನು ನನ್ನ ಮನಸ್ಸಿನಲ್ಲಿ ಬರೆಯುತ್ತ ಸಮಯವನ್ನು ಕೊಲ್ಲುತ್ತಲಿದ್ದೆನು. ಈ ಸಮಯದಲ್ಲಿ ಬಸ್ಸು ಕೊಡಗಿನ ಎಲ್ಲೆಯನ್ನು ದಾಟಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪ್ರವೇಶಿಸಿತು. ಅದರ ಕುರುಹುಗಳಾಗಿ ಉದ್ದವಾಗಿ ಬೆಳೆದ ಅಡಿಕೆ ಮರಗಳೂ ತೆಂಗಿನ ಮರಗಳೂ ದೃಗ್ಗೋಚರವಾದುವು. ನಾನು ಒಂದು ಎಳೆನೀರನ್ನು ಸಂಪಾಜೆಯಲ್ಲಿ ಕ್ರಯಕ್ಕೆ ತೆಗೆದುಕೊಂಡು ಕುಡಿದೆನು.

ಮಂಗಳೂರಿಗೆ ತಲುಪಿದೆನು; ಕಾಲೇಜಿನಲ್ಲಿ ಪ್ರವೇಶವನ್ನು ಪಡೆದುದೂ

ಆಯಿತು. ಹಾಸ್ಟೆಲ್ಲಿನಲ್ಲಿ ವಾಸಮಾಡಲು ಪ್ರಾರಂಭಿಸಿದೆನು. ಗೃಹವನ್ನೂ ಬಂಧು-ಮಿತ್ರರನ್ನೂ ಕುರಿತು ನನ್ನ ಮನಸ್ಸು ತಲ್ಲಣಿಸಿತು. ಅತ್ತಿಗೆಯು ಒಂದು ಬುಟ್ಟಿ ತುಂಬಾ ತಿಂಡಿಯನ್ನು ನನಗೆ ಕಟ್ಟಿಕೊಟ್ಟಿದ್ದಳು. ಅದರಲ್ಲಿ ಒಂದು ಭಾಗವನ್ನು ಬೊಂಬಾಯಿಗೆ ಹಡಗೇರಲು ಹೊರಟಿರುವ ಸುಬ್ಬುವಿಗೆ ನಾನು ಕೊಟ್ಟೆನು. ಅವನನ್ನು ಹಡಗು ಹತ್ತಿಸಲು ನಾನು ಬಂದರದವರೆಗೆ ಹೋಗಿದ್ದೆನು.

ಇಲ್ಲಿ ಕಾಲೇಜು ದಿನಗಳ ವಿವರಗಳನ್ನು ಹೇಳಲು ನಾನು ಬಯಸುವದಿಲ್ಲ. ಅವುಗಳಿಂದ ವಾಚಕರಿಗೆ ಹೆಚ್ಚಿನ ಪ್ರಯೋಜನವು ಲಭಿಸುವಂತಿಲ್ಲ, ಎಂದು ಮಾತ್ರವಲ್ಲ; ಆ ಸಂಗತಿಗಳು ಪ್ರಕೃತ ಕತೆಗೆ ಸಂಬಂಧ ಪಟ್ಟವುಗಳಲ್ಲ

ಮನೆಯಿಂದ ಪ್ರತಿವಾರವೂ ಅಣ್ಣಾ ಮತ್ತು ಅತ್ತಿಗೆ ಇವರ ಪ್ರೇಮಪರಿಪೂರ್ಣವಾದ ಕಾಗದಗಳು ಬರುತ್ತಲಿದ್ದವು. ವ್ಯಾಸಂಗವು ಮುಂದೆ ಸಾಗುತ್ತಲಿದ್ದಿತು ರಜಾಕಾಲಗಳಲ್ಲಿ ಸ್ವಂತ ಊರಿಗೆ ಹೋಗುತ್ತಲಿದ್ದೆನು.

ವರ್ಷಗಳು ನಾಲ್ಕು ಗಮಿಸಿದವು; ನಾನು ಬಿ. ಎ. ಪರೀಕ್ಷೆ ತೀರಿಸಿ ಮನೆಗೆ ಬಂದೆನು. ರಾಮುವು ಈಗ ಬೆಳೆದು ದೊಡ್ಡವನಾಗಿರುತ್ತಾನೆ. ಎಳೆಂಟು ವರ್ಷ ಪ್ರಾಯದವನಾಗಿರುತ್ತಾನೆ; ತುಂಟತನದಲ್ಲಿ ಅವನು ನನಗಿಂತಲೂ ಮಿಗಿಲೆಂದು ಅತ್ತಿಗೆಯು ಅವನನ್ನು ಕುರಿತು ತನ್ನ ಅಭಿಪ್ರಾಯವನ್ನು ನನ್ನೊಡನೆ ವ್ಯಕ್ತಪಡಿಸಿದಳು; ಆದರೆ ಆ ಕಲೆಯಲ್ಲಿ ನಾನೇ ಶ್ರೇಷ್ಠನೆಂದೆನಿಸಿಕೊಳ್ಳಬೇಕೆಂಬುದು ನನ್ನ ಬಯಕೆ; ಆದರೆ ಪ್ರಾಯವು ಅತಿಕ್ರಮಿಸಿದೆ; ತುಂಟತನವನ್ನು ಮಾಡಲು ಬರುವದಿಲ್ಲ.

ವಿರಾಮ ಕಾಲವು. ಮನೆಯಲ್ಲಿ ಮೂಗಿನ ತನಕ ತಿಂದು ಅತ್ತಿಗೆಯೊಡನೆ ಹರಟೆಯನ್ನು ಹೊಡೆಯುವದು, ಇಲ್ಲವೆ ನಾಯಿಯ ಹಾಗೆ ಬೀದಿ ಬೀದಿಗಳಲ್ಲಿ ಅಲೆಯುವದಲ್ಲದೆ ನನಗೆ ಬೇರೆ ಯಾವ ಕೆಲಸವೂ ಇಲ್ಲ. ಬಸವಣ್ಣನ ಹಾಗೆ ಇದ್ದೇನೆ; ಜನನಿಬಿಡವಾದ ಮಂಗಳೂರಿನಲ್ಲಿ ಕಾಲಯಾಪನೆ ಮಾಡಿದ ನನಗೆ ಮಡಿಕೇರಿಯಲ್ಲಿ ವಿರಾಮ ಕಾಲವನ್ನು ವ್ಯಯಗೊಳಿಸುವದೆಂದರೆ, ಅತ್ಯಂತ ಬೇಸರದ ಕಾರ್ಯವಾಗಿದ್ದಿತು.

ಆದರೆ ಈ ಸಾರೆ ಹಾಗಾಗಲಿಲ್ಲ; ಅತ್ತಿಗೆಯ ಒಬ್ಬ ಗೆಳತಿಯು ನಮ್ಮಲ್ಲಿಗೆ ಬಂದಿದ್ದಾಳೆ. ಪ್ರಾಯವು 16-17 ವರ್ಷವಿರಬಹುದು; ನೋಡುವುದಕ್ಕೆ ರೂಪವತಿಯೇ ಆಗಿದ್ದಾಳೆ.

ಮೊದಮೊದಲು ಅವಳು ನನ್ನೊಡನೆ ಮಾತಾಡಲು ನಾಚುತ್ತಿದ್ದಳು; ಆದರೆ ನಮ್ಮಿಬ್ಬರಲ್ಲಿ ಮೈತ್ರಿಯು ಬೆಳೆದಂತೆಯೇ ನಾವು ದೊಡ್ಡ ಗೆಳೆಯರಾಗಿ ಪರಿಣಮಿಸಿದೆವು. ಚದುರಂಗವಾಡುವುದು, ಕವಡಿಯಾಡುವುದು ಮೊದಲಾದ ವಿನೋದಗಳಲ್ಲಿ ಭಾಗವನ್ನು ವಹಿಸಿ, ನಾವು ಹೊತ್ತು ಕಳೆಯುತ್ತಲಿದ್ದೆವು. ಕೆಲವು ಸಾರೆ ನಾನು ಇಂಗ್ಲೀಷ ಕತೆಗಳನ್ನು ಓದಿ, ಅವುಗಳ ತಾತ್ಪರ್ಯವನ್ನು ಅವಳಿಗೆ ವಿವರಿಸಿ

ಹೇಳುತ್ತಲಿದ್ದೆನು. ನಮ್ಮ ಆಟಗಳು, ವಿನೋದಗಳು ಇವುಗಳಲ್ಲಿ ಸಾಧಾರಣವಾಗಿ ಅತ್ತಿಗೆಯೂ ಭಾಗವನ್ನು ವಹಿಸುತ್ತಲಿದ್ದಳು.

ಹೀಗಿರಲು, ಒಂದು ದಿನ ನಾನು :ಮಂಗಳೂರಿನಲ್ಲಿ ಕಂಡ ಒಂದು ಸಿನೆಮಾದ ಕತೆಯನ್ನು ಅತ್ಯಂತ ಸ್ವಾರಸ್ಯವಾಗಿ ವಿವರಿಸಿ ಹೇಳುತ್ತಲಿದ್ದೆನು. ಅತ್ತಿಗೆ ಮತ್ತು ಸೀತೆ (ಅದಾಗಿದೆ ಆ ಗೆಳತಿಯ ಹೆಸರು) ಇವರು ಬಹು ಆಸಕ್ತಿಯಿಂದ ನಾನು ನುಡಿಯುತ್ತಿರುವುದನ್ನು ಆಶ್ರಾವಿಸುತ್ತಲಿರುವರು. ಪುಟ್ಟ ರಾಮುವು ಅವನ ಕೋಣೆಯಲ್ಲಿ (ನಾನು ಬಾಲಕನಾಗಿರುವಾಗ ಅದು ನನ್ನ ಕೋಣೆಯಾಗಿದ್ದಿತು) ಕುಳಿತುಕೊಂಡು ಯಾವುದೋ ಒಂದು ಪಾಠವನ್ನು ಓದುತ್ತಲಿದ್ದನು. ಅವನು ಓದುವನೇ ಅಥವಾ ಅಳುವನೇ ಎಂಬುದನ್ನು ನಿರ್ಧರಿಸುವದು ಸ್ವಲ್ಪ ಶ್ರಮವಹವಾದ ಕೆಲಸವಾಗಿದೆ. ಒಳಮನೆಯಲ್ಲಿ "ಅತ್ತೆ"ಯು ಪಾತ್ರೆಗಳನ್ನು ಬೆಳಗುತ್ತಿರುವ ಸಪ್ಪಳವು ಆಗಾಗ ನಮ್ಮ ಸಂಭಾಷಣೆಗೆ ಒಂದು ದೊಡ್ಡ ವಿಘ್ನವಾಗಿ ಪರಿಣಮಿಸುತ್ತಲಿರುವುದು. ಮನೆಯ ಹೊರಗಿನ ಬೀದಿಯಲ್ಲಿ ಬೊಗಳುತ್ತಿರುವ ಶುನಕಗಳ ಕ್ರಂದನವು ನಮ್ಮ ಮಾತು-ಕತೆಗಳಿಗೆ ಹಲವು ಸಾರೆ ಅಡ್ಡಿಯನ್ನುಂಟು ಮಾಡುತ್ತಲಿರುವುದು.

ನಾನು ನುಡಿಯುತ್ತಲಿದ್ದ ಸಂಗತಿಯು "ಡಂಭಾಚಾರಿ" ಎಂಬ ತಮಿಳು ಸುಸ್ವರ ಚಿತ್ರವನ್ನು ಕುರಿತಾಗಿದ್ದಿತು. ಆ ಕತೆಯು ಅತ್ಯಂತ ಮನೋಹರವಾದುದೊಂದಾಗಿದೆ. ಅದು ನಮಗೆ ಮಹತ್ತಾದ ಒಂದು ಪಾಠವನ್ನು ನೀಡುತ್ತಲಿರುವುದು. "ಡಂಭಾಚಾರಿ"ಯ ಅವಿವರ್ತನೆ-ವಿಷಯಾಂಧತೆಗಳನ್ನೂ ಅವನ ಪತ್ನಿಯ ಅಕೃತ್ರಿಮವಾದ ಪತಿಪ್ರೇಮವನ್ನೂ ಆ ಚಲಚಿತ್ರವನ್ನು ನೋಡಿದವರಿಗೆ ಎಂದಿಗೂ ವಿಸ್ಮರಿಸಲು ಅಶಕ್ಯವಾಗಿದೆ. ನಾನು ಆ ಕತೆಯನ್ನು ಅತ್ಯಂತ ತನ್ಮಯನಾಗಿ ಉಪ್ಪು-ಕಾರಗಳನ್ನು ಸೇರಿಸಿ ಅತ್ತಿಗೆಗೂ ಸೀತೆಗೂ ವಿವರಿಸುತ್ತಲಿದ್ದೆನು.

ಈ ವೇಳೆಯಲ್ಲಿ ನಿತ್ಯಪದ್ಧತಿಯಂತೆ ವಾಕಿಂಗು' ಹೋಗಿದ್ದ ನಮ್ಮಣ್ಣನು ಮನೆಯೊಳಗೆ ಪ್ರವೇಶಿಸಿ, ಹತ್ತಿರದ ಒಂದು ಆಸನದಲ್ಲಿ ತನ್ನ ಶರೀರಭಾರವನ್ನು ಪ್ರತಿಷ್ಠಾಪನೆ ಮಾಡಿದನು. ಅವನ ಆಗಮನವು ನನ್ನ ಉಪನ್ಯಾಸಕ್ಕೆ ಭಂಗವನ್ನು ತಂದಿತು. ಕೆಲವು ನಿಮಿಷಗಳ ವರೆಗೆ ನಾವೆಲ್ಲರೂ ಮೌನವನ್ನವಲಂಬಿಸಿದ್ದೆವು. ಐದು ನಿಮಿಷಗಳ ನಂತರ ನಾನು ಹೇಳುತ್ತಿದ್ದ "ಡಂಭಾಚಾರಿ"ಯ ಕತೆಯನ್ನು ಮುಂದುವರಿಸಿದೆನು. ಅಷ್ಟರಲ್ಲಿ ಅಣ್ಣನು ನಡುವೇ ಬಾಯಿಹಾಕಿ, ಸೀತು ವಿನೊಡನೆ "ಏನೇ ಸೀತು, ಅವನೊಡನೆ ಹೆಚ್ಚಿಗೆ ಸಲಿಗೆಗೆ ಹೋಗುವದೊಳ್ಳೆಯದಲ್ಲ" ಎಂದು ನಗುತ್ತ ನುಡಿದನು.

"ಅದೇಕೆ?" ಎಂದು ಅವಳು ತನ್ನ ಮೋರೆಯನ್ನು ತುಸ ಕೆಂಪು ಮಾಡಿಕೊಂಡು ಪ್ರಶ್ನಿಸಿದಳು.

"ಸೀತು, ಶೀನುವು ಮಹಾ ಪೋಲಿಯು! ಅವನು ದೊಡ್ಡವನಾಗಿದ್ದರೂ ತನ್ನ ಹುಡುಗಾಟವನ್ನು ಬಿಟ್ಟಿರುವದಿಲ್ಲ. ನೀನೇನಾದರೂ ಅವಿವೇಕವನ್ನೋ ಅಥವಾ

ಹೆಡ್ಡತನವನ್ನೂ ಅವನ ಮುಂದೆ ತುಸ ಪ್ರದರ್ಶಿಸಿದರೆ ಸಾಕು; ನಾಳೆಯ ದಿನದ ರಾಷ್ಟ್ರಬಂಧುವಿನಲ್ಲಿ ಅದು ಪ್ರಕಟವಾಗಿ, ಬೀದಿಬೀದಿಯ ಮಾತಾಗಿ ಹೋಗುವದು!"

"ಅದು ಹೇಗೆ?"

"ಮಂಕೇ! ನಿನಗಿನ್ನೂ ಹೊಳೆಯಲಿಲ್ಲವೇ? ಈ ಶೀನುವು ಚಿಲ್ಲರೆ ಆಸಾಮಿಯಲ್ಲ. ಈ ಶತಮಾನದಲ್ಲಿ ಲೋಕವು ಒಂದು ವಿಚಿತ್ರ ತರಗತಿಯ ಪ್ರಾಣಿಗಳಿಂದ ತುಂಬಿ ಹೋಗಿದೆ!"

"ಯಾವ ಪ್ರಾಣಿಗಳು?"

"ತರುಣ ಸಾಹಿತಿಗಳು! ಪತ್ರಿಕಾ ವ್ಯವಸಾಯಿಗಳು!"

"ಅದೇಕೆ? ನೀವು ಅವರನ್ನು ವಿಚಿತ್ರ ಪ್ರಾಣಿಗಳೆಂದೇಕೆ ಕರೆಯುತ್ತಿರುವಿರಿ?" ಎಂದು ಅವರಿಬ್ಬರ ಸಂಭಾಷಣೆಯಲ್ಲಿ ನಾನು ತಲೆಯನ್ನು ನುಗ್ಗಿಸುತ್ತ ಪ್ರಶ್ನಿಸಿದೆನು.

"ವಿಚಿತ್ರ ಪ್ರಾಣಿಗಳಲ್ಲದೆ ಇನ್ನೇನು? ನೀವು ಸಾಹಿತ್ಯದಲ್ಲಿ ಹೊಸತು, ನೈಜರೂಪು ಇರಬೇಕೆಂದು ನುಡಿಯುತ್ತ, ಅತ್ಯುನ್ನತ ಶಿಖರದಲ್ಲಿ ಪರಿಶೋಭಿಸುತ್ತಲಿರುವ ಸಾಹಿತ್ಯದೇವತೆಯನ್ನು ಕೆಳಗಿನ ಮೆಟ್ಟಲಿಗೆ ಎಳೆದು ತರಲು ಪ್ರಯತ್ನಿಸುತ್ತಿರುವಿರಲ್ಲವೆ? ಮನೆಯಲ್ಲಿ ಏನಾದರೂ ಸ್ವಲ್ಪ ಗದ್ದಲವಾದರೆ, ಒಂದು ಹರಟೆಯೆಂದೋ-ಸಣ್ಣ ಕತೆಯೆಂದೋ ಅದಕ್ಕೆ ಹೆಸರನ್ನಿತ್ತು, ಆ ಸಂಗತಿಯನ್ನು ಬೈಲಿಗೆಳೆದು ರಂಪು ಮಾಡುವ ಜನರಲ್ಲವೇ ಈ ತರುಣ ಸಾಹಿತಿಗಳು?" ಎಂದು ಅಣ್ಣನು ಚಿಕ್ಕದಾದ ಒಂದು ಉಪನ್ಯಾಸಕ್ಕೆ ಪೀಠಿಕೆಯನ್ನು ಹಾಕಿದನು.

ಅವನು ಹಳೆಯ ಕವಿಗಳ ಭಕ್ತನು; ನವೀನತೆಯಲ್ಲಿ ಅವನಿಗೆ ರುಚಿಯಿಲ್ಲ. ಹೊಸ ರೀತಿಯನ್ನು, ಸಾಹಿತ್ಯದೇವಿಯ ಇಂದಿನ ಈ ಅಭಿನವ ರೂಪವನ್ನು-ತಾತ್ಸಾರ ಮಾಡುವುದು ಅವನ ಪದ್ಧತಿಯು! ನಾನಾದರೋ ನವೀನತೆಗೆ ಶರಣುಹೋದವನು. ಹೊಸತು ನನ್ನ ಜೀವನದ ಜೀವಾಳವು. ಹೊಸ ರೀತಿಯನ್ನು ಅವಲಂಬಿಸಿ ನಾನು ನನ್ನ ಕಲಾಶಾಲೆಯ ದಿನಗಳಲ್ಲಿ ಕೆಲವು ಕತೆಗಳನ್ನೂ, ಹರಟೆಗಳನ್ನೂ ಬರೆದಿದ್ದೆನು. ಆ ಸಂಗತಿಯನ್ನು ಅಣ್ಣನು ತಿಳಿದುದರಿಂದ, ಮೇಲೆ ಹೇಳಿದಂತೆ ಸೀತುವಿನೊಡನೆ ಅವನು ನನ್ನನ್ನು ಪರಿಹಾಸ ಮಾಡಿದನು.

ನಾನೊಬ್ಬ ಬರಹಗಾರನೆಂದು ತಿಳಿದೊಡನೆಯೇ ಆ ಸುಂದರಿಯು ಒಂದು ಹೆಬ್ಬುಲಿಯನ್ನು ನೋಡುವ ಹಾಗೆ ಭಯಚಕಿತ ದೃಷ್ಟಿಯನ್ನು ನನ್ನ ಕಡೆಗೆ ಬೀರಿದಳು. ಅವಳ ಅಗಲಿನ ಚರ್ಯೆಯು-ಅವಳ ವಿಚಾರವು-ನಾನೊಬ್ಬ ರಾಕ್ಷಸನೆಂದಾಗಿರುತ್ತದೆ, ಎಂಬುದನ್ನು ಸೂಚಿಸುತ್ತಲಿದ್ದಿತು.

"ನೀವು ನನ್ನನ್ನೂ, ಸಾಹಿತ್ಯದ ಹೆಸರು ಹೇಳಿ ಕೆಸರಿಗೆ ಎಳೆಯಲಿಕ್ಕಿಲ್ಲವಷ್ಟೇ!" ಎಂದು ಕಂಪಿಸುತ್ತ ಅವಳು ನುಡಿದಳು.

"ಅದೇಕೆ ಅಷ್ಟು ಭಯವು, ನಾನು ಬರಹಗಾರನೆಂಬುದನ್ನು ತಿಳಿಯುವಾಗ?" ಎಂದು ನಗುತ್ತ ನಾನು ಪ್ರಶ್ನಿಸಿದೆನು.

"ನಿಜವಾಗಿಯೂ ಹೊಸಯುಗದ ಬರಹಗಾರರಿಗೆ ಭಯಪಡಬೇಕಾಗಿ ಬಂದಿರುವದು! ಇಂದಿನ ಲೇಖಕರಿಗೆ ಒಂದು ಚಿಕ್ಕ ಸಂಗತಿಯು ಲಭಿಸಿದರೂ ಸಾಕು; ಅದನ್ನು ಕುರಿತು ಅವರು ತಮ್ಮ ಮೆದುಳನ್ನುಪಯೋಗಿಸಿ ಒಂದು ದೊಡ್ಡ ರಂಪೇ ಮಾಡಿಬಿಡುವರು!"

"ಆ ಭಯವು ನಿನಗಿಲ್ಲದಿರಲಿ! ಬೇರೆ ಯಾರನ್ನು ನಾನು ಕೆಸರಿಗೆಳೆಯಲು ಯತ್ನಿಸಿದರೂ, ನಿನ್ನೊಡನೆ ಆ ಗೋಜಿಗೆ ಹೋಗೆನು!" ಎಂದು ನಾನು ಅವಳಲ್ಲಿ ಧೈರ್ಯವನ್ನು ನೀಡಿದೆನು.

ಇದಾಗಿದ್ದಿತು ಆ ದಿನದ ಸಂಭಾಷಣೆ.

ನಾನು ಬರಹಗಾರನೆಂದು ತಿಳಿದೊಡನೆಯೇ ಅವಳ ಮೈತ್ರಿಯು ವರ್ಧಿಸಿತು. ನಾನು ಬರೆದ ಕತೆಗಳನ್ನೂ, ಹಾಸ್ಯ-ಪ್ರಬಂಧಗಳನ್ನೂ, ಕವನಗಳನ್ನೂ ಓದಿ ಕೇಳುವುದಕ್ಕಾಗಿ ಅವಳು ಸಂಕೋಚವಿಲ್ಲದೆ ನನ್ನ ಕೋಣೆಗೆ ಬರಲು ಪ್ರಾರಂಭಿಸಿದಳು. ನಾನೂ ನನ್ನ ಬರವಣಿಗೆಗಳನ್ನು ಓದಿ ಹೇಳುವದು ಒಂದು ಸಂತೋಷವೆಂದು ಬಗೆದಿದ್ದನು. ಆ ನನ್ನ ಕೃತ್ಯಗಳಲ್ಲಿ ದುರುದ್ದೇಶಗಳಿರಲಿಲ್ಲ. ಅವಳೂ ಆ ಬರವಣಿಗೆಗಳನ್ನು ಸವಿದು ಹರ್ಷವನ್ನು ತಾಳುತ್ತಲಿದ್ದಳು.

ಆದರೆ ಆ ಕವನಗಳು, ಕತೆಗಳು, ಬರವಣಿಗೆಗಳು ನನ್ನನ್ನು ವಿವಾಹವೆಂಬ ಕೆಸರಿನ ಹೊಂಡದಲ್ಲಿ ದೂಡಲು ಪರ್ಯಾಪ್ತವಾದುವು! ಅದೇಕೆ ಮದುವೆಯನ್ನು-ದಾಂಪತ್ಯಜೀವನವನ್ನು ಕೆಸರಿನ ಹೊಂಡವೆಂದು ನುಡಿದುದೆಂಬುದಾಗಿ ನೀವು ಒಂದು ವೇಳೆ ಆಕ್ಷೇಪಿಸಬಹುದು; ಆದರೆ ಸ್ವಾಮಿಾ, ನಾನು ಒಂದು ಮಾತನ್ನು ಹೇಳುತ್ತೇನೆ; ಕಣ್ಣುಗಳನ್ನು ಮುಚ್ಚಿ ನಿಷ್ಪಕ್ಷವಾದ ಬುದ್ಧಿಯೊಡನೆ ದಾಂಪತ್ಯಜೀವನದ ಎರಡು ಪಾರ್ಶ್ವಗಳ ಚಿತ್ರಗಳನ್ನು ಅವಲೋಕಿಸಿರಿ. ಆಗ ನಿಶ್ಚಯವಾಗಿಯೂ ಅದು ಚಿರಂಡಿಯೆಂಬುದು ನಿಮಗೆ ಹೊಳೆಯುವುದು.

ಮದುವೆಯ ವಿಚಾರವು ನನ್ನ ಮೆದುಳಿನಲ್ಲಿ ಆ ಕಾಲದಲ್ಲಿ ಸ್ಥಳವನ್ನು ಆವರಿಸಿರಲಿಲ್ಲ. ಹಲವು ಸಾರೆ ನಿರ್ಮಲವಾದ ಜೀವನವನ್ನು ಕೈಕೊಳ್ಳಬೇಕೆಂದೂ ಬ್ರಹ್ಮಚರ್ಯದ ಮೂಲಕ ಜೀವನದ ಪೂರ್ಣ ಚೈತನ್ಯವನ್ನು ಸಾಧಿಸಬೇಕೆಂದೂ ನಾನು ಆಲೋಚಿಸುತ್ತಲಿದ್ದೆನು. ದಾಂಪತ್ಯಜೀವನವು ಕತೆಗಳಲ್ಲಿಯೂ ಪ್ರಬಂಧಗಳಲ್ಲಿಯೂ ಬಣ್ಣಿಸಲು ಮನೋಹರವಾಗಿದೆಯಲ್ಲದೆ, ಆ ಬಲೆಯಲ್ಲಿ ಬಿದ್ದರೆ ನನ್ನ ಪಾಡು ನಾಯಿಪಾಡು, ಕತ್ತೆಯಪಾಡು ಆಗುವದೆಂಬದನ್ನು ನಾನು ಚೆನ್ನಾಗಿ ಬಲ್ಲೆನು; ಆದರೆ ನಾನು ಮಾತ್ರ ರಾತ್ರಿ ಕಂಡ ಬಾವಿಯಲ್ಲಿ ಹಗಲೇ ಬಿದ್ದುಬಿಟ್ಟೆನು.

ವಿವಾಹಜೀವನವನ್ನು ಇಷ್ಟು ರುಕ್ಷವಾಗಿ ಚಿತ್ರಿಸಲು ನಾನು ಪ್ರಯತ್ನಿಸುವುದೇಕೆ? ಎಂಬುದಾಗಿ ನೀವು ಒಂದು ವೇಳೆ ಶಂಕಿಸಬಹುದು. ನಾನು ಎದೆಯನ್ನು ಬಿಚ್ಚಿ ನುಡಿಯುವೆನು; ಒಬ್ಬ ಮಾನವಜೀವಿಗೆ (ಅವನಾಗಲಿ ಅಥವಾ ಅವಳಾಗಿರಲಿ ಚಿಂತೆಯಿಲ್ಲ) ದಾಂಪತ್ಯಜೀವನವನ್ನು ಕೈಕೊಂಡ ನಂತರ ಒಂದು ನರಪ್ರಾಣಿಯ

ಹಾಗೆ ಬಾಳುವದು ಕೇವಲ ಅಸಾಧ್ಯವೆಂದು ಹೇಳಬಹುದು. ಒಂದು ಕತ್ತೆಯ ಹಾಗೆಯೋ ಅಥವಾ ಕಾಡುಹಂದಿಯ ಹಾಗೆಯೋ ಈ ಸಂಸಾರದಲ್ಲಿ ಒಂದು ಶತಾಬ್ದ ಪರ್ಯಂತ ಮಾನವನು ಜೀವಿಸಬಲ್ಲನು; ಆದರೆ ಒಬ್ಬ ನರಜೀವಿಯಂತೆ ತನ್ನ ಜೀವನೋದ್ದೇಶವನ್ನು ತಿಳಿದು ಅದಕ್ಕನುಸಾರವಾಗಿ ವರ್ತಿಸುವದು ಮಾತ್ರ ದಾಂಪತ್ಯ ಜೀವನದಲ್ಲಿ ಕೇವಲ ಪ್ರಯಾಸವು! ಮನುಷ್ಯನು ತನ್ನ ಜೀವನದ ಉದ್ದೇಶವನ್ನರಿಯದೆ ಹೋದರೆ, ಅವನ ಬದುಕಿಗೂ ಪ್ರಾಣಿಗಳ ಬಾಳಿಗೂ ಹೆಚ್ಚು ಭೇದವಿಲ್ಲ. ಅವನು ಎರಡು ಕಾಲುಗಳಿರುವ ಪಶುವಾಗಿರುತ್ತಾನೆ! ಒಂದು ವೇಳೆ ನೀವು ಜೀವನಕ್ಕೆ ಉದ್ದೇಶವಿಲ್ಲವೆಂದು ಹೇಳಬಹುದು! ಹಾಗಾದರೆ ನೀವೇಕೆ ಬಾಳುವಿರಿ? ಏಕೆ ಚಿಂತಿಸುವಿರಿ? ಅಂತ್ಯದಲ್ಲೇಕೆ ಮೃತರಾಗುತ್ತಿರುವಿರಿ?

ಇಲ್ಲ; ನಿಜವಾಗಿಯೂ ಮನುಷ್ಯಜೀವನಕ್ಕೆ ಒಂದು ಉದ್ದೇಶವಿದೆ. ಈ ಬದುಕುಗಳು-ನಮ್ಮ ಆತ್ಮಗಳು-ಒಂದು ನಿರ್ದಿಷ್ಟಸ್ಥಾನಕ್ಕೆ ಗಮಿಸುತ್ತಿರುವ ಒಂದು ಮಹಾಪ್ರವಾಸದ ಒಂದೊಂದು ಭಾಗಗಳಾಗಿರುವುವು. ಆ ಉದ್ದಿಷ್ಟ ಪ್ರದೇಶಕ್ಕೆ ಈ ಆತ್ಮಗಳು ಇಂದಿಲ್ಲದಿದ್ದರೆ ಇನ್ನೊಂದು ದಿನವಾದರೂ ತಲುಪಿಯೇ ತಲುಪುವುವು. ನಾವು ಈ ತತ್ವವನ್ನರಿತು ನಮ್ಮ ಬಾಳುಗಳಲ್ಲಿ ಆ ಸ್ಥಳಕ್ಕಿರುವ ಸರಿಯಾದ ಪಥವನ್ನು ತೋರಿಸಬೇಕಾಗಿರುವುದು. ಸರಿಯಾದ ಮಾರ್ಗವನ್ನು ತೋರಿಸುವುದೇ ಮನುಷ್ಯ ಜೀವನದ ಗುರಿಯು!

ದಾಂಪತ್ಯಜೀವನದಲ್ಲಿ ಆ ಲಕ್ಷ್ಯವನ್ನು ಸರಿಯಾಗಿ ನೋಡುತ್ತ ಮುಂದಕ್ಕೆ ತೆರಳಲು ಅಸಾಮಾನ್ಯ ಮನಶ್ಶಕ್ತಿಯುಳ್ಳವರಿಗೆ ಮಾತ್ರ ಸಾಧ್ಯವಿದೆ. ಇತರರು ಆ ಕೆಸರಿನಿಂದ ಪಾರಾಗಲಾರರು. ಒಬ್ಬ ಮನುಷ್ಯನು ಮದುವೆಯಾದೊಡನೆಯೇ ತಾನು, ತನ್ನಾಕೆ, ತನ್ನ ಮಕ್ಕಳು, ತನ್ನ ಕುಟುಂಬ ಎಂಬಿತ್ಯಾದಿಗಳ ಗೋಡೆಗಳು ಅವನನ್ನು ವಿಶಾಲವಾದ ವಿಶ್ವದಿಂದ ವಿಂಗಡಿಸಿ ತೋರ್ಪಡಿಸುವವು. ಈ ನಾಲ್ಕು ಗೋಡೆಗಳ ಮಧ್ಯದಲ್ಲಿ ಸಿಲುಕಿ ಅವನು ನೋಡಲಾಗದೆ ಬಿಕ್ಕಟ್ಟಾದ ಕಿಷ್ಕಿಂಧೆಯನ್ನೇ ಜಗತ್ತೆಂದು ಭಾವಿಸಿ, ಆ ಗೋಡೆಗಳ ಹೊರಗಿನ ಲೋಕವು ತನಗೆ ಅನ್ಯವಾದುದೆಂದ ಅಜ್ಞಾನದಿಂದ ತಿಳಿದು, ಆ ಜಗತ್ತಿನೊಡನೆ ಪೈಶಾಚಿಕ ರೀತಿಯಲ್ಲಿ ವರ್ತಿಸಲು ಮನುಷ್ಯನು ಹಿಂಜರಿಯುವದಿಲ್ಲ. ಲೋಕದಲ್ಲಿ ನಡೆಯುತ್ತಿರುವ ಸಕಲ ಅನರ್ಥಗಳ ಕಾರಣವು ಈ ಮೂರು ಅಕ್ಷರಗಳ ಮ-ದು-ವೆ ಎಂಬ ವಚನದ ತಪ್ಪು ತಿಳುವಳಿಕೆಯಾಗಿದೆ. ಅಬ್ಸಿನಿಯಾವನ್ನು ಇಟಲಿ ಆಕ್ರಮಿಸಿದುದೇಕೆ? ಈಗ ಚೀನಾ ದೇಶವನ್ನು ಜಪಾನು ಆಕ್ರಮಿಸುತ್ತಿರುವುದೇಕೆ? ಎಲ್ಲವೂ ಇದಕ್ಕಾಗಿಯೇ. ತಾನು, ತನ್ನದೆಂಬ ತಪ್ಪು ಭಾವನೆಯೇ! ಅದಕ್ಕೆ ಕಾರಣವು ಈ ವಿವಾಹ ಬಂಧನದ ದುರುಪಯೋಗವೇ? ಆದುದರಿಂದಲೇ ನಾನು ರಾತ್ರಿ ಕಂಡ ಕೂಪದಲ್ಲಿ ಹಗಲು ಬಿದ್ದೆನೆಂದು ಹೇಳಿದುದು!

ಹಾಗಾದರೆ ಮನುಷ್ಯಕುಟುಂಬವು ಜಗತ್ತಿನಲ್ಲಿ ನೆಲೆ ನಿಲ್ಲುವುದು ಹೇಗೆ? ಮನುಷ್ಯರು ತಮ್ಮ ಜೀವಿತೋದ್ದೇಶವನ್ನು ತಿಳಿಯದೆ ಹೋದರೆ ಅದರಿಂದ ಯಾವ

ಸಾರ್ಥಕವಿದೆ? ಹಂದಿಯಂತೆಯೋ ಅಥವಾ ಕುನ್ನಿಯಂತೆಯೋ ತನ್ನ ಸಂತಾನ ಗಳನ್ನು ಹೆಚ್ಚಿಸುವುದರಿಂದ ಯಾವ ಲಾಭವು? ಅಂತ್ಯದಲ್ಲಿ ನಾವು ನಮ್ಮಲ್ಲಿ ಬಡಿ ದಾಡುವುದಕ್ಕೆ ಮಾತ್ರವಾಗಿದೆ! ಮಾನವನು ತನ್ನನ್ನು ತಾನೇ ಕೊಲ್ಲುವುವಕ್ಕಾಗಿ ತನ್ನ ಸಂತಾನಗಳನ್ನು ಹೆಚ್ಚಿಸುತ್ತಲಿರುವನು. ನಮ್ಮ ಮಕ್ಕಳಾದರೂ ತಮ್ಮ ಜೀವಿ ತೋದ್ದೇಶವನ್ನು ತಿಳಿದುಕೊಂಡು ಅದರಂತೆ ವರ್ತಿಸಿದರೆ, ಅದರಿಂದ ಸ್ವಲ್ಪ ಸಾರ್ಥ ಕತೆಯಿರುವದು; ಆದರೆ ಅದು ಹೇಗೆ ಸಾಧ್ಯ! ಕೊಬ್ಬಿ ಬೆಳೆದ ಹಂದಿಯಿಂದ (ಅದ ಕ್ಕಿಂತ ಉತ್ತಮವಾದ ಉಪಮೆಯು ಈ ಬುದ್ದಿಗೆ ತೋಚದು. ಕ್ಷಮಿಸಿರಿ!) ಉತ್ತಮ ಬುದ್ಧಿಯ ಸಂತಾನಗಳನ್ನು ಹೇಗೆ ಬಯಸಬಹುದು?

ನಾವು ಮಾಡಬೇಕಾದುದೇನು? ನಮ್ಮ ಜೀವನಗಳನ್ನು ಸ್ವಚ್ಛಗೊಳಿಸಬೇಕಾ ದರೆ, ಮಲಿನತೆಯನ್ನು ಪರಿತ್ಯಜಿಸಿ, ಪುರಾತನ ಭಾರತದ ಬಳಿಗೆ ಗಮಿಸಬೇಕಾಗಿದೆ; ಅಂದರೆ ದೃಢವಾದ ಮನಸ್ಸನ್ನು, ಜೀವನದ ಉದ್ದೇಶವನ್ನು, ಫಲಶೂನ್ಯಕರ್ಮಾನು ಷ್ಠಾನದ ರಹಸ್ಯವನ್ನು ಅರಿತು ಅದರಂತೆ ವರ್ತಿಸಲು ನಾವು ಕಲಿಯಬೇಕಾಗಿದೆ.

ಇದರಿಂದ ವಾಚಕರಿಗೆ ಬೇಸರವಾಗಬಹುದು. ವಿಚಾರತರಂಗಗಳ ಕುದುರೆ ಲಗಾಮು ಹಾಕುವೆನು. ನಾನು ಸೀತೆಯಲ್ಲಿ ತೋರಿಸಿದ ಪ್ರೇಮವು ನಿಷ್ಕಾಪಟ್ಯ ಮಯವಾಗಿದ್ದಿತು. ಪ್ರಾರಂಭದಲ್ಲಿ ವಿಷಯಲಾಲಸೆಯ ರಂಗು ಆ ಪ್ರೇಮಕ್ಕಿರಲಿಲ್ಲ. ನನ್ನ ಸ್ವಭಾವವು ಎಷ್ಟು ತುಂಟತನದಿಂದ ಕೂಡಿದ್ದರೂ, ಅದು ಕಲಂಕಮಯವಾ ಗಿರಲಿಲ್ಲ. ಇದು ಆತ್ಮಪ್ರಶಂಸೆಯ ಮಾತೆಂದು ವಿಚಾರಿಸಬೇಡಿರಿ.

ಆದರೆ ಮನುಷ್ಯನ ಹೃದಯವು ದೌರ್ಬಲ್ಯಯುಕ್ತವಾದುದು; ಮತ್ತು ಮಂಗನ ಸ್ವಭಾವವುಳ್ಳದ್ದಾಗಿದೆ. ಇಂದ್ರಿಯನಿಗ್ರಹವನ್ನು ಕುರಿತು ಮಾತಾಡು ವದು ಅತ್ಯಂತ ಸುಲಭವಾದ ಕಾರ್ಯವು, ಆದರೆ ಆಚರಣೆಯಲ್ಲಿ ಕೊಂಡು ಬರು ವದು ಅತ್ಯಂತ ಪ್ರಯಾಸದ ಕೆಲಸವಾಗಿದೆ ಸೀತೆಯನ್ನು ಕುರಿತು ಒಂದು ವಿಧದ ಆಸಕ್ತಿ, ಅವಳ ರೂಪದರ್ಶನದಿಂದ ಒಂದು ಬಗೆಯ ಆಹ್ಲಾದ, ಅವಳ ಮೃದು ಮಧುರವಾದ ವಚನಾಶ್ರವಣದಿಂದ ಒಂದು ವಿಧದ ಸಂತೋಷ ಇವುಗಳು ನನ್ನಲ್ಲಿ ಗೋಚರವಾಗಲು ಪ್ರಾರಂಭಿಸಿದುವು. ಒಂದು ಮಾತಿನಲ್ಲಿ ಹೇಳುವದಾದರೆ, ಅನು ರಾಗವೆಂಬ ಆ ಕಾಹಿಲೆಯ ಪ್ರಥಮ ಲಕ್ಷಣಗಳು ನನ್ನಲ್ಲಿ ತಲೆದೋರತೊಡಗಿದವು.

ಆಗಲಾದರೂ ನನ್ನ ಮನಸ್ಸೆಂಬ ಹಯದ ಕಡಿವಾಣಗಳನ್ನು ಬಿಗಿಯಾಗಿ ಹಿಡಿದಿದ್ದರೆ, ಈ ಕೆಸರಿನ ಕೂಪದಿಂದ ಪಾರಾಗಲು ಶಕ್ಯವಿದ್ದಿತೆಂದು ನಾನು ಈಗ ಭಾವಿಸುತ್ತಲಿರುವೆನು; ಆದರೆ ಚಿಂತಿಸಿ ಫಲವಿಲ್ಲ, ಕಾರ್ಯವು ಮಿಂಚಿಹೋಯಿತು!

ಒಂದು ದಿನ ಸಾಯಂಕಾಲ ನಾನು ನನ್ನ ಕೋಣೆಯಲ್ಲಿ ಕುಳಿತುಕೊಂಡು ಒಂದು ಕವನವನ್ನು ಓದಿ, ಅದರ ತಾತ್ಪರ್ಯವನ್ನು ಸೀತೆಗೆ ವಿವರಿಸಿ ಹೇಳುತ್ತಿದ್ದೆನು. ಸೀತೆಯು ನನ್ನೆದುರಿಗಿರುವ ಮೇಜದ ಮೇಲೆ ತನ್ನ ಮೊಣಕೈಗಳನ್ನು ಮಡುಗಿ, ತನ್ನ ಅಂಗೈಗಳಿಂದ ತನ್ನ ಎರಡು ಕಪೋಲಗಳನ್ನೂ ಒತ್ತಿ ಹಿಡಿದುಕೊಂಡು, ನಾನು

ನುಡಿಯುತ್ತಿರುವುದನ್ನು ಶ್ರಾವಿಸುತ್ತಲಿದ್ದಳು. ನಾನು ಓದಿ ಹೇಳುತ್ತಿದ್ದ ಕವನವು ಒಂದು ಪ್ರಣಯಗೀತೆಯಾಗಿದ್ದಿತು. ನಲ್ಲನು ತನ್ನ ಇನಿಯಳ ಮೇಲಿರುವ ಅಗಾಧ ಪ್ರೇಮವನ್ನು ಆ ಕವನದಲ್ಲಿ ಸೂಚಿಸುತ್ತಲಿದ್ದನು

ಆ ಕವನವನ್ನು ಓದುತ್ತಿರುವಾಗ ನನ್ನ ಮನಸ್ಸಿನಲ್ಲಿ ಒಂದು ಬಗೆಯ ವಿಕಾರವು ವಿದ್ಯುತ್‌ಸಂಚಾರದಂತೆ ಉದ್ಭವಿಸಿದ ಹಾಗೆ ನನಗೆ ಭಾಸವಾಯಿತು. ಆಗ ನಾನು ಹೇಗೆ ವರ್ತಿಸುತ್ತಿದ್ದೆನೆಂಬುದನ್ನು ವಿವರಿಸಲು ನಾನು ಶಕ್ತನಲ್ಲ. ಮನಸ್ಸು ಆಕಾಶದಲ್ಲಿರುವ ಗಾಳಿಯ ಪಟದಂತೆ ನನ್ನ ಶಾಸನದಿಂದ ತಪ್ಪಿಸಿಕೊಂಡಿತು ಒಂದು ವೇಳೆ ವಿಷಯರಾಕ್ಷಸನ ತಾಂಡವಭೂಮಿಯೇ ನನ್ನ ಮನಸ್ಸಾಗಿದ್ದಿತೆಂದು ಹೇಳಬಹುದು.

"ಸೀತಾ........!" ಎಂದೆನು ನಾನು.

ಅವಳು ನನ್ನ ಮೊಗವನ್ನು ನೋಡಿದಳು. ಅವಳು ನನ್ನ ಕಣ್ಣುಗಳಿಗೆ ಮೋಹಿನಿಯಂತೆ ತೋರಿದಳು. ಅವಳ ಪ್ರತಿಯೊಂದು ಅಂಗಗಳೂ ಅತ್ಯಂತ ಲಾವಣ್ಯಮಯವಾಗಿ ತೋರತೊಡಗಿದುವು. ಒಬ್ಬ ಕಾಮುಕನ ಲೋಚನಗಳಿಗೆ ಆ ರೀತಿಯಲ್ಲಿ ಗೋಚರವಾದುದರಲ್ಲಿ ಆಶ್ಚರ್ಯವಿಲ್ಲ!

"ಏನು?—" ಎಂದಳು ಅವಳು.

"ನಿನ್ನ ಕಣ್ಣುಗಳು ರತ್ನದಂತೆ ಹೊಳೆಯುತ್ತಲಿರುವವು!" ಎಂದೆನು. ಲೋಚನಗಳು ರತ್ನಗಳ ಹಾಗೆ ಪ್ರಕಾಶಿಸುತ್ತಿವೆಯೆಂದು ನುಡಿಯುವುದು ಅಸಂಬದ್ಧತೆಯೆಂಬುದನ್ನು ನಾನು ಬಲ್ಲೆನು; ಆದರೆ ಅನುರಾಗದ ಹೆಂಡವನ್ನು ಕುಡಿದ ನನ್ನಲ್ಲಿ ಯುಕ್ತಾಯುಕ್ತವಿವೇಚನೆಯ ಚೈತನ್ಯವಿರಲಿಲ್ಲ.

"ಸಾಕು, ಸುಮ್ಮನಿರಿ! ಯಾವಾಗ ನೋಡಿದರೂ ಕಣ್ಣುಗಳು ಹೊಳೆಯುತ್ತಿರುವವು! ಮುಖವು ತಾವರೆಯ ಹಾಗಿದೆ, ಎಂದು ನೀವು ವಿವರಿಸುತ್ತಿರುವಿರಿ. ಇದೆಲ್ಲವನ್ನೂ ಕೇಳುವಾಗ ನನಗೆ ಬೇಸರವಾಗುತ್ತದೆ."

"ಸೀತಾ-" ಮುಂದೆ ನುಡಿಗಳು ನನ್ನ ಬಾಯಿಯಿಂದ ಹೊರಬೀಳಲಿಲ್ಲ. ನೈಸರ್ಗಿಕವಾದ ವಿಚಿತ್ರವನ್ನು ನೋಡಿರಿ! ವಿಕಾರಗಳಿಲ್ಲದಿರುವಾಗ,-ಅನುರಾಗ ಕಾಹಿಲೆಯು ಇಲ್ಲದಿರುವಾಗ,-ತಾಸುತಾಸುಗಳ ಪರ್ಯಂತ ಯಾವ ಸಂಕೋಚವೂ ಇಲ್ಲದೆ ನಾನು ಮಾತಾಡುತ್ತಲಿದ್ದೆನೋ, ಅನುರಾಗಬದ್ಧನಾದ ನಂತರ ಆ ರೀತಿ ಸಂಕೋಚವಿಲ್ಲದೆ ವರ್ತಿಸಲು ನನ್ನಿಂದ ಸಾಧ್ಯವಿಲ್ಲ. ಆ ರೀತಿ ವರ್ತಿಸಲು ಆ ನೈಸರ್ಗಿಕ ರಮಣಿಯು ಒಪ್ಪುವುದಿಲ್ಲ; ಆದರೆ ಅನುರಾಗದ ಕೆಸರಿನಲ್ಲಿ ಬಿದ್ದ ತರುಣ-ತರುಣಿಯರು ತಮ್ಮ ಇಂಗಿತಗಳನ್ನು ಮಾತುಗಳಿಗಿಂತ ಹೆಚ್ಚಾಗಿ ಕಣ್ಣುಗಳು, ಕೈಗಳು, ಹುಬ್ಬುಗಳು, ಮುಖವಿಕಾರಗಳು, ಅಂಗಚೇಷ್ಟೆಗಳು ಎಂಬಿವುಗಳ ಮೂಲಕ ಪರಸ್ಪರರಿಗೆ ತಿಳಿಸುತ್ತಾರೆ ಅದಾಗಿದೆ ಕಾಮುಕ-ಕಾಮುಕಿಯರ ಭಾಷೆ!-ಹತ್ತು ಮಾತುಗಳಲ್ಲಿ ವಿವರಿಸಬೇಕಾದ ಸಂಗತಿಯನ್ನು ಕ್ಷಣಾರ್ಧದ ಕಡೆಗಣ್ಣಿನ ನೋಟವು ತಿಳಿಸಬಲ್ಲುದು!

ನನ್ನನ್ನು ಬಾಧಿಸಿದ ರೋಗವು ಯಾವದೆಂಬುದನ್ನು ನೀವು ತಿಳಿದಿರಬಹುದು. ಕಾಮುಕನ ನುಡಿಗಳು, ಶಾರೀರಿಕ ಗೋಷ್ಠಿಗಳು ಇವುಗಳಲ್ಲಿ ತುಂಬಿ ತುಳುಕುತ್ತಿರುವ ಅನುರಾಗವನ್ನು ಕಂಡು ಹಿಡಿಯುವ ಚಾತುರ್ಯವು ಹೆಂಗುಸಿನಲ್ಲಿದೆ. ನನ್ನ ನುಡಿಗಳು ಅರ್ಧ ಅರ್ಧವಾಗಿ ಹೊರಬೀಳುತ್ತಿರುವದು ಸೀತೆಯು ನಗುವಂತೆ ಮಾಡಿತು ಅವಳು ಗೌರವವಾದ ಭಾವವನ್ನು ತಾಳಲು ಪ್ರಯತ್ನಿಸಿದಳು; ಆದರೆ ಅದು ಫಲಕಾರಿಯಾಗಲಿಲ್ಲ.

"ಸೀತಾ—"ಎಂದೆನು.

"ಸೀತಾ-ಸೀತಾ-ಎಂದು ನುಡಿಯುತ್ತಿರುವಿರಿ! ಏಕೆ, ಏನು, ಎಂಬುದನ್ನು ಉಸುರಬಾರದೇ?" ಬಹು ಚಾಣಾಕ್ಷಳಾದ ಹುಡುಗಿಯವಳು! ನನ್ನ ಮನಸ್ಸಿನಲ್ಲಿರುವದೇನೆಂಬುದನ್ನು ಅವಳು ಬಲ್ಲಳು. ಆಗಲಿನ ಪರಿಸ್ಥಿತಿಯು, ನನ್ನ ಅವಸ್ಥೆಯು, ನನ್ನ ವಿಚಾರ ಏನೆಂಬುದರ ಕಲ್ಪನೆಯನ್ನು ಅವಳಿಗೆ ನೀಡಿರುವುವು ಆದರೂ ಏನನ್ನೂ ತಿಳಿಯದವಳ ಹಾಗೆ ನನ್ನ ಮನಸ್ಸನ್ನು ಪ್ರಕಾಶಪಡಿಸುವುದಕ್ಕಾಗಿ ಆ ರೀತಿ ಪ್ರಶ್ನಿಸುತ್ತಲಿರುವಳು!

"ನೀನು....ನನ್ನನ್ನು....ವಿವಾಹ....ವಾಗಲು...." ಆ ಮೇಲೆ ಮಾತುಗಳು ಹೊರಡಲಿಲ್ಲ ನನ್ನ ಆಗಲಿನ ಸಂಕಟವನ್ನು ನಾನು ವಿವರಿಸುವುದರ ಬದಲು, ನೀವು ಊಹಿಸುವದೇ ಮೇಲು

ಅವಳು ಮಾತಾಡಲಿಲ್ಲ; ಒಂದು ಮುಗುಳ್ನಗೆ-ಒಂದು ವಿಕಾರ-ಇವುಗಳೆಲ್ಲ ಒಂದು ಮಿಂಚಿನ ಹಾಗೆ ಅವಳ ವದನಮಂಡಲದಲ್ಲಿ ತಲೆದೋರಿ ಮಾಯವಾದುವು. ನಾನು ನನ್ನ ಆಸನದಿಂದ ಎದ್ದು ಅವಳ ಕರವನ್ನು ಪಿಡಿದುಕೊಂಡೆನು. ಅನಂತರ ಅವಳ ಕಣ್ಣುಗಳಲ್ಲಿ ನೋಡುತ್ತ ನುಡಿದೆನು:

"ನೀನು ನನ್ನ ಎದೆಯಲ್ಲಿರುವ ಗಾಯಕ್ಕೆ ಉಪ್ಪನ್ನು ಬೆರಸಬೇಡ"

ಅವಳು ಮಾತಾಡಲಿಲ್ಲ. ಮತ್ತೆ:"ನನ್ನ ಮಾತಿಗೆ ಜವಾಬನ್ನು ಹೇಳು!" ಎಂದೆ.

ಪುನಃ ಮೌನ. "ಚ" ಕಾರವೂ ಅವಳ ತುಟಿಗಳನ್ನು ಭೇದಿಸಿಕೊಂಡು ಹೊರ ಬೀಳದು.

"ನಿನ್ನೆದೆಯಲ್ಲಿ ನನಗೆ ಸ್ಥಾನವಿಲ್ಲವೆ?" ಎಂದು ನಾನು ನಿರಾಶಾಭರಿತನಾಗಿ ಪ್ರಶ್ನಿಸಿದೆನು.

ಮೌನ; ಆದರೆ ಒಂದು ಮಂದಹಾಸದ ಬೆಳಕು ಆ ಮೊಗದಲ್ಲಿ ತಲೆದೋರಿತು. ಅನುರಾಗಪೂರ್ಣವಾದ ಒಂದು ನೋಟವನ್ನು ನನಗೆ ದಯಪಾಲಿಸಿದಳು.

"ನೀನು ನನ್ನನ್ನು........ಪ್ರೀತಿಸುವೆಯಾ?"

"ಹೂಂ...." ಎಂಬುದು ಮಾತ್ರವಾಗಿದ್ದಿತು ಅವಳ ಪ್ರತ್ಯುತ್ತರವು.

ನನ್ನೆದೆಯ ಭಾರವು ಹಗುರವಾಯಿತು. ಅವಳು ನನ್ನ ಕೋಣೆಯಿಂದ ಹೊರಬಿದ್ದಳು.

ಪುನಃ ಅವಳ ಮುಖವನ್ನು ನೋಡಲೂ, ಮಾತಾಡಲೂ ನನ್ನ ಎದೆಯಲ್ಲಿ ಧೈರ್ಯವಿರಲಿಲ್ಲ. ಅವಳನ್ನು ನೋಡುವಾಗ ನನ್ನ ಮುಖವು ಲಜ್ಜೆಯಿಂದ ಕೆಂಪು ಬಣ್ಣವನ್ನು ತಾಳುತ್ತಲಿದ್ದಿತು. ಅವಳ ಸ್ಥಿತಿಯಾದರೂ ಹಾಗೆಯೇ!

ನಮ್ಮಲ್ಲಿ ಉಂಟಾದ ಈ ಮಾರ್ಪುಗಳು ಚಾಣಾಕ್ಷಮತಿಯಾದ ನನ್ನ ಅತ್ತಿಗೆಗೆ ಹೊಳೆಯದೇ ಇರಲಿಲ್ಲ. ಇದು ಒಂದುವೇಳೆ ಅವಳು ನನ್ನಮೇಲೆ ವಿವಾಹದ ಬಲೆಯನ್ನು ಬೀಸಲು ಹೂಡಿದ ಕಾರಸ್ಥಾನವಾಗಿರಬಹುದು.

ಒಂದು ದಿನ ನಾನು ನನ್ನ ಕೋಣೆಯಲ್ಲಿ ಯಾವುದೋ ಒಂದು ಪುಸ್ತಕವನ್ನು ಓದುವುದರಲ್ಲಿ ನಿರತನಾಗಿದ್ದೆನು. ಅತ್ತಿಗೆಯೂ ಆಗ ಬಂದು ಕೋಣೆಯ ಒಳ ಹೊಕ್ಕಳು.

"ಶೀನೂ—" "ಏನತ್ತಿಗೆ?"

"ನೀನೇಕೆ ಸೀತೆಯನ್ನು ಕೆಣಕಿದುದು?"

"ನಾನೇನೂ ಮಾಡಲಿಲ್ಲ!"

"ಎಲ್ಲವೂ ನನಗೆ ಗೊತ್ತು ನಿಮ್ಮಿಬ್ಬರ ರಹಸ್ಯ. ನಿನ್ನ ರೊಟ್ಟಿಯು ತುಪ್ಪದಲ್ಲಿ ಬಿದ್ದಿತು! ವಿವಾಹ ಸಂಬಂಧವನ್ನು ಕುರಿತು ನಿನ್ನ ಅಣ್ಣಾ ಚಿಂತಿಸುತ್ತಲಿರುವರು."

ಈ ಕಾರಸ್ಥಾನದಲ್ಲಿ ಅಣ್ಣನ ಕೈ ಇರಲಾರದು, ಎಂದು ನಾನು ಬಗೆದಿದ್ದೆನು; ಆದರೆ ಈಗ ಹಾಗಲ್ಲ. ಈ ನಾಟಕದಲ್ಲಿ ಅವನೂ ಭಾಗವನ್ನು ವಹಿಸಿರುವನೆಂಬುದು ತಿಳಿಯಬಂದಿತು. ಅಷ್ಟರಲ್ಲಿ ರಾಮುವು:—"ಚಿಕ್ಕಪ್ಪಾ! ಇಗೋ, ನಿನಗೊಂದು ತಂತಿ" ಎಂದು ಒಂದು ಟೆಲಿಗ್ರಾಮನ್ನು ತಂದುಕೊಟ್ಟನು. ಅದರಲ್ಲಿ:

"ಶ್ರೀನಿವಾಸಮೂರ್ತಿ! ನೀನು ಬಿ. ಎ. ದಲ್ಲಿ ಉತ್ತಮ ತರಗತಿಯಲ್ಲಿ ತೇರ್ಗಡೆಯನ್ನು ಹೊಂದಿರುವಿ" ಎಂದಿದ್ದಿತು.

ಅತ್ತಿಗೆಯು ಅದನ್ನು ಓದಿ ತಿಳಿದುಕೊಂಡಳು. ಅವಳ ಎದೆಯು ಸಂತೋಷದಿಂದ ಹಿಗ್ಗಿ ಹೋಯಿತು

---

## [೧೧]

ವಿವಾಹಪಾಶವು ನನ್ನ ಕೊರಳನ್ನು ಬಿಗಿದಿತು. ಇದು ವರೆಗೆ ಕಾಡಿನಲ್ಲಿರುವ ಶುಕದಂತೆ ಸರ್ವಸ್ವತಂತ್ರನಾಗಿ ಹಾರಾಡುತ್ತಲಿದ್ದ ನಾನು ಗೂಡಿನೊಳಗೆ ಬಂಧಿತನಾದೆನು. ಸಿಹಿಯೆಂದು ವಿಚಾರಿಸಿ ನಾನು ಕಡಿದ ಹಣ್ಣಿನ ತಿರುಳು ಅತ್ಯಂತ ಕಹಿಯಾಗಿದೆಯೆಂಬುದು ದಾಂಪತ್ಯಜೀವನದ ಪ್ರಾರಂಭ ದಿನಗಳಲ್ಲಿ ತೋರಲಿಲ್ಲ. ಹೇಗೂ ಸಂಸಾರವೆಂಬ ರಥದ ಚಕ್ರಕ್ಕೆ ಕಟ್ಟಲ್ಪಟ್ಟವನಾಗಿ ನಾನು ನರಳಬೇಕಾಗಿ ಬಂದಿತು.

ವಿವಾಹವಿಧಿಗಳನ್ನು ಕುರಿತು ಇಲ್ಲಿ ವರ್ಣಿಸಲು ನಾನು ಅಪೇಕ್ಷಿಸುವದಿಲ್ಲ. ಅವುಗಳು ಅತ್ಯಂತ ನಿರಸವೂ ವಿಷಾದಾಂತವೂ ಆದ ಒಂದು ನಾಟಕದ ನಾಂದೀಕರ್ಮಗಳಾಗಿರುತ್ತವೆ. ಸಾಧಾರಣವಾಗಿ ಮದುವೆಯ ಸಮಾರಂಭಗಳಲ್ಲಿ ಗೋಚರವಾಗು

ವುದು ಆನಂದ, ಉತ್ಸಾಹ, ಹರ್ಷಗಳ ಚಿತ್ರಗಳಾಗಿರುತ್ತವೆ; ಆದರೆ ಮನುಷ್ಯನು ಇವುಗಳ ಅಡಿಯಲ್ಲಿ ಬದುಕನ್ನು ಸುಡತಕ್ಕ ಒಂದು ಜ್ವಾಲಾಮುಖಿಯು ಸದಾ ಭಯಂಕರವಾಗಿ ಉರಿಯುತ್ತಿರುವುದೆಂಬುದನ್ನು ತಿಳಿಯುವುದಿಲ್ಲ. ಆಗಾಗ ಅದು ಮೇಲಿನ ನೆಲವನ್ನು ಸೀಳಿ, ಮನುಷ್ಯನ ಎದೆಯನ್ನು ಸುಡುವ ಚಿತ್ರವನ್ನು ನಾವು ನಮ್ಮ ದೈನಂದಿನ ಪರಿಚಯಗಳ ಮೂಲಕ ನೋಡಬಹುದು.

ಮದುವೆ ಎಂದರೆ ಏನು? ಅದಕ್ಕೆ ಸರಿಯಾದ ಒಂದು ವ್ಯಾಖ್ಯಾನವನ್ನು ನೀಡಲು ನಾನಿಲ್ಲಿ ಬಯಸುವುದಿಲ್ಲ. ಅದರ ಒಂದು ಭಾಗವನ್ನು ನೋಡುವಾಗ, ಅದು ನಮ್ಮ ಜೀವನದಲ್ಲಿ ಒಂದು ಪ್ರಧಾನವೂ ಪವಿತ್ರವೂ ಆದ ಒಂದು ಮೆಟ್ಟಲೇಬುದಾಗಿ ಕಾಣುತ್ತಲಿರುವದು. ಅದರ ಇನ್ನೊಂದು ಪಾರ್ಶ್ವವನ್ನು ನೋಡುವಾಗ, ಯಾವದು ಪಾವನವೆಂದು ಮೊದಲು ತೋರಿಬಂದಿತೋ, ಅದು ಮನುಷ್ಯನಿಗೆ ಅವನ ಮನ ಸೇಚ್ಛೆಯಂತೆ ವ್ಯಭಿಚರಿಸಲು ಸಮುದಾಯವು ಕೊಡುತ್ತಿರುವ ಒಂದು ಸಮ್ಮತ ವಾಗಿದೆ, ಎಂದು ದೃಗ್ಗೋಚರವಾಗುತ್ತಿದೆ. ಎರಡೂ ಚಿತ್ರಗಳು ಸತ್ಯವಾಗಿರು ತ್ತವೆ, ಎಂಬುದನ್ನು ಮನುಷ್ಯನು ಜ್ಞಾಪಕದಲ್ಲಿಡಬೇಕಾಗುತ್ತದೆ. ಕೇವಲ ಸ್ವಾರ್ಥ ಶೂನ್ಯತೆಯಿಂದ ತನ್ನ ಜೀವನದ ಗುರಿಯನ್ನು ಅರಿತು, ಆ ಅನುಭೂತಿಯನ್ನು ಹೊಂದುವದಕ್ಕಾಗಿ ಕರ್ಮನಿಷ್ಠನಾಗಿ ಒಬ್ಬನು ವಿವಾಹಬಂಧವನ್ನು ಹೊಂದಿದರೆ, ಆ ಕೆಲಸವು ಅತ್ಯಂತ ಉತ್ತಮವೂ ಪಾವನವೂ ಆದ ಪ್ರಯತ್ನವೆಂದು ಹೇಳಬಹುದು. ಅದಲ್ಲದೆ ಕೇವಲ ತನ್ನ ಇಂದ್ರಿಯಗಳನ್ನು ತೃಪ್ತಿಗೊಳಿಸುವದಕ್ಕಾಗಿ ಒಬ್ಬನು ದಾಂಪತ್ಯಜೀವನವನ್ನು ಕೈಕೊಂಡರೆ, ಆ ಕೃತ್ಯವು ವಾರವನಿತೆಯಲ್ಲಿ ಗಮಿಸುವ ದಕ್ಕಿಂತ ಹೆಚ್ಚು ಉತ್ತಮವಾದ ಕೆಲಸವಾಗುವದಿಲ್ಲ. ಮೊದಲನೆಯದನ್ನು ಸಮು ದಾಯವು ತಿರಸ್ಕಾರ ದೃಷ್ಟಿಯಲ್ಲಿ ನೋಡುತ್ತಿದ್ದರೆ (ವೇಶ್ಯಾಗಮನವನ್ನು) ಎರಡ ನೆಯದಕ್ಕೆ (ವಿವಾಹವೆಂಬ ಸಮ್ಮತದ ಮೂಲಕ ನಡೆಯುತ್ತಿರುವ ವ್ಯಭಿಚಾರ) ಸಮುದಾಯವು ಪ್ರೋತ್ಸಾಹವನ್ನು ನೀಡುತ್ತಿರುವದು, ಎಂಬುದೇ ಅವುಗಳೆರಡಕ್ಕೂ ಇರುವ ಅಂತರವು.

ನಾನೇಕೆ ಮದುವೆಯಾದೆನು? ಇದನ್ನು ಕುರಿತು ನಾನು ವಿವರಿಸಲಾರೆ. ಈ ಪುಟಗಳನ್ನು ಬರೆಯುತ್ತಿರುವಾಗ, ಅದನ್ನು ಕುರಿತು ನಾನು ವಿಚಾರಮಗ್ನನಾಗಿ ದ್ದೆನು. ಏಕೆ? ಅದರ ಮೂಲಕ ಜೀವನದ ಗುರಿಯನ್ನು ಸಾಧಿಸುವುದಕ್ಕಾಗಿಯೇ? ಎಂದಿಗೂ ಅಲ್ಲ. ವಿವಾಹಿತನಾಗುವುದಕ್ಕೆ ಮೊದಲು ನಾನು ಆ ಗುರಿಯಿಂದ ಎಷ್ಟು ದೂರದಲ್ಲಿದ್ದೆನೋ, ಈಗಲೂ ನಾನು ಅಷ್ಟೇ ದೂರದಲ್ಲಿ ಇರುವೆನು. ಮೊದಲು ಸುವ್ಯಕ್ತವಾಗಿದ್ದ ಚಿತ್ರಗಳು ಈಗ ಅವ್ಯಕ್ತವಾಗಿರುತ್ತವೆ. ಆದುದರಿಂದ ವಿವಾಹವು ನನ್ನನ್ನು ಮೇಲಕ್ಕೆ ಒಯ್ಯಲಿಲ್ಲ, ಎಂಬುದು ನಿರ್ವಿವಾದವಾಗಿದೆ. ಹಾಗಾದರೆ ನಾನೇಕೆ ಮದುವೆಯಾದೆನು? ಎಲ್ಲರೂ, ಅಂದರೆ ಸರ್ವಸಾಮಾನ್ಯ ಜನರು ಏಕಾಗಿ ಆಗುವರೋ ಅದಕ್ಕಾಗಿಯೇ ನಾನೂ ಆದೆನೆಂದು ಹೇಳಬಹುದು; ಅಂದರೆ ನನ್ನ ಚಪಲತೆಯನ್ನು-

ನನ್ನ ಮನಸ್ಸಿನಲ್ಲಿರುವ ವಿಷಯವಾಸನೆಯು ರಾವಣನನ್ನು,-ಮನುಷ್ಯನ ಪೈಶಾಚಿಕ ಸ್ವಭಾವವನ್ನು,--ಸಂತೃಪ್ತಿಗೊಳಿಸುವುದಕ್ಕಾಗಿ ಯಾವ ಆದರ್ಶವೂ ಉದ್ದೇಶವೂ ಇಲ್ಲದೆ ಮದುವೆಯಾದೆನೆಂದು ನಾನು ಒಪ್ಪಿಕೊಳ್ಳುವೆನು.

ಯಾರೋ ಒಬ್ಬರು ಹಾಸ್ಯಗಾರರು ಗ್ರಾಮೊಫೋನಿನಲ್ಲಿ ಮದುವೆ ಮಾಡಿಕೊಂಡವರನ್ನು ನೋಡುವುದಕ್ಕೆ ಚೆನ್ನಾಗಿದೆಯೇ ಹೊರತು, ಮದುವೆಮಾಡಿಕೊಂಡರೆ ಚೆನ್ನಾಗಿರುವುದಿಲ್ಲವೆಂಬುದಾಗಿ ಹಾಡುತ್ತಿರುವ ಪದವು ನನ್ನ ಸ್ಮೃತಿಪಥದಲ್ಲಿ ಆಗಾಗ ಬರುತ್ತಿರುವದು ಕೇವಲ ವಿನೋದಾರ್ಥವಾಗಿ ಅವರು ಹಾಡಿದುದೇ ಆದರೂ, ಆ ನುಡಿಗಳಲ್ಲಿ ಅತ್ಯಂತ ಕಠಿಯಾದ ಸತ್ಯಾಂಶವಿದೆಯೆಂಬುದನ್ನು ನಾನು ಬಲ್ಲೆನು. ಇದು ನಾನು ಬರಿಯ ಬಾಯಿಂದ ಹೇಳುವ ಮಾತಲ್ಲ; ಅನುಭವಗಳಿಂದ ವ್ಯಕ್ತವಾದ ಸಂಗತಿಯಾಗಿದೆ.

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ರಾತ್ರಿಕಂಡ ಕೂಪದಲ್ಲಿ ಹಗಲು ಬಿದ್ದ ಹೆಡ್ಡನು ನಾನಾದೆನು! ಲೋಕದ ಜನರೆಲ್ಲರೂ ನನ್ನ ಹಾಗೆಯೇ ನಿರಂತರ ದುಃಖಮಯವಾದ ನರಕದ ಬಾಳನ್ನು ಸ್ವರ್ಗವೆಂದು ಭಾವಿಸಿ, ನನ್ನಂತೆಯೇ ಕೆಸರಿನಲ್ಲಿ ಬಿದ್ದು ಅಲ್ಲಿಂದ ಏಳಲಾರದೆ, ಬಿದ್ದಲ್ಲಿಯೇ ಊರ್ಧ್ವಶ್ವಾಸಗಳನ್ನು ಎಳೆಯುತ್ತ, ಅದೇ ಸ್ವರ್ಗವೆಂದು ಉದ್ಘೋಷಿಸುತ್ತಿರುವ ಚಿತ್ರವನ್ನು ನೋಡುತ್ತಿರುವುದು ನನಗೆ ಒಂದು ಬಗೆಯ ಸಮಾಧಾನವನ್ನು ನೀಡುತ್ತಿರುವುದು. ಮನುಷ್ಯನಾದವನು ಈ ಯಾತನೆಗಳನ್ನೆಲ್ಲ ಸವಿಯಬೇಕಾಗಿ ಬರುವುದೆಂಬ ವೇದಾಂತವು ನನ್ನ ಆತ್ಮಕ್ಕೆ ಸ್ವಲ್ಪ ಶಾಂತಿಯನ್ನು ನೀಡುತ್ತಲಿರುವದು.

ನಾನು ಅದೃಷ್ಟಶಾಲಿಯು; ಹೆಚ್ಚಿನ ಶ್ರಮವಿಲ್ಲದೆ ಮದ್ರಾಸಿನಲ್ಲಿ ಒಂದು ಹಡಗು ಕಂಪೆನಿಯ ಮದ್ರಾಸ ಶಾಖೆಯಲ್ಲಿ ಅಸಿಸ್ಟೆಂಟು ಮ್ಯಾನೇಜರನ ಉದ್ಯೋಗವು ನನಗೆ ಲಭಿಸಿತು. ಹತ್ತಿನ್ನೂರು ರೂಪಾಯಿಗಳ ಸಂಬಳವು ಕೈತುಂಬಾ ಸಿಗುತ್ತಿದ್ದುದರಿಂದ, ನನ್ನ ಜೀವನವು ವಿಜಯಪ್ರದವೆಂಬುದಾಗಿದ್ದಿತು ನನ್ನ ಆ ಕಾಲದ ನಂಬಿಕೆಯು

ವರ್ಷವೊಂದು ಗತಿಸಿತು ಪತ್ನೀಸಮೇತನಾಗಿ ಮದ್ರಾಸಿನಲ್ಲಿ ನೆಲೆಸಿದೆನು. ಅದರೊಡನೆಯೇ ಈ ಬದುಕಿನ ಕಡಲಿನಲ್ಲಿ ಬೇಕಾದಷ್ಟು ಬಿರುಗಾಳಿಗಳೆದ್ದು, ಅಸಾಧ್ಯವಾದ ಉಪಟಳಗಳನ್ನು ಮಾಡತೊಡಗಿದುವು.

ಅವಳು ಯಾರೆಂಬುದು ನನಗೆ ತಿಳಿಯದು. ಅವಳ ಹೆಸರು ಸೀತೆ, ನನ್ನ ಪತ್ನಿ, ಚಲುವೆ ಎಂದು ಮಾತ್ರವಲ್ಲದೆ ಅದಕ್ಕಿಂತ ಹೆಚ್ಚು ನಾನು ಬಲ್ಲವನಲ್ಲ ಒಬ್ಬ ಹೆಂಗುಸನ್ನು ಕುರಿತು ಇದಕ್ಕಿಂತ ಹೆಚ್ಚು ತಿಳಿಯಲು ಸಾಧ್ಯವಿಲ್ಲ. ಎಷ್ಟು ಸದಾಚಾರಪರಿಪೂರ್ಣವಾಗಿದ್ದರೂ ಅವಳ ಬಾಳು ಗಂಡಸಿಗೆ ಒಂದು ರಹಸ್ಯವಾಗಿದೆ.

ಪ್ರಾರಂಭ ದಿನಗಳಲ್ಲಿ ಎಲ್ಲವೂ ಸರಿಹೋಯಿತು. ನವದಂಪತಿಗಳಲ್ಲಿರುವ ಲಜ್ಜೆ, ಉತ್ಸಾಹ, ದಾಂಪತ್ಯಜೀವನದ ಸವಿ ಈ ಸಂಗತಿಗಳು ಆ ಬದುಕು ಆನಂದ

ಮಯವೆಂದು ನಿರ್ಧರಿಸಲು ಪರ್ಯಾಪ್ತವಾಗಿದ್ದುವು; ಆದರೆ ಅವುಗಳನ್ನು ವರ್ಣಿಸಿ ಹೊತ್ತನ್ನು ಕೊಲ್ಲಲು ನಾನು ಬಯಸುವುದಿಲ್ಲ; ಆದರೂ ಆ ದಾಂಪತ್ಯ ಜೀವನವೆಂಬ ಗಗನದ ಒಂದು ಮೂಲೆಯಲ್ಲಿ ಚಿಕ್ಕದಾದ ಒಂದು ಮೇಘವು ತಲೆದೋರಿ, ಅಂತ್ಯದಲ್ಲಿ ಆ ನಭೋಮಂಡಲವನ್ನು ಸಂಪೂರ್ಣವಾಗಿ ಆವರಿಸಿತು.

ಅದೊಂದು ಭಾನುವಾರವು. ಕಂಪೆನಿಯಲ್ಲಿ ಕೆಲಸವಿರಲಿಲ್ಲ. ಉತ್ತರ ಕರ್ನಾಟಕದ ಒಂದು ಪತ್ರಿಕೆಯವರ ಆವಶ್ಯದಂತೆ, ಅವರು ಪ್ರಕಟಿಸಲು ನಿರ್ಧರಿಸಿರುವ ಒಂದು ವಿಶೇಷ ಸಂಚಿಕೆಗಾಗಿ ನಾನು ನನ್ನ ಆಫೀಸು ಕೋಣೆಯಲ್ಲಿ ಕುಳಿತು ಒಂದು ಲೇಖವನ್ನು ಬರೆಯುತ್ತಲಿದ್ದೆನು. ನಾನು ಏಕಾಗ್ರ ಮನಸ್ಸಿನಲ್ಲಿ ಆ ಉಪನ್ಯಾಸವನ್ನು ಬರೆಯುತ್ತಲಿದ್ದುದರಿಂದ, ನನ್ನ ಹಿಂದುಗಡೆ ಸೀತುವು ಬಂದು ನಿಂತದ್ದು ನನಗೆ ಗೋಚರವಾಗಲೇ ಇಲ್ಲ; ನಾನು ಬರೆವಣಿಗೆಯಲ್ಲಿ ನಿರತನಾಗಿದ್ದೆನು. ಅವಳು ಕಾಲುತಾಸಿನವರೆಗೆ ಬರೆವಣಿಗೆಯನ್ನು ನೋಡುತ್ತ ನಿಂತಿದ್ದಳೆಂದು ತೋರುತ್ತದೆ.

ಅವಳು ನನ್ನ ಕೈಯಲ್ಲಿ ಹಿಡಿದ ಲೇಖನಿಯನ್ನು ಕಿತ್ತುಕೊಂಡು:—"ಏನು ಬರಹವಪ್ಪಾ ಇದು?" ಎಂದು ನುಡಿದಳು.

ನಾನು ಅತ್ಯುತ್ಸಾಹಭರಿತನಾಗಿ ಬರವಣಿಗೆಯಲ್ಲಿ ನಿರತನಾಗಿರಲು, ಅದಕ್ಕೆ ಈ ರೀತಿಯ ಒಂದು ವಿಘ್ನವು ಒದಗಿದುದನ್ನು ಕಂಡು ನನ್ನ ಮನಸ್ಸು ಸ್ವಲ್ಪ ರೋಷಾಕುಲವಾಯಿತು. "ಸೀತೂ! ನನ್ನ ಬರೆವಣಿಗೆಗೆ ತೊಂದರೆಯನ್ನು ಉಂಟುಮಾಡದಿರು" ಎಂದು ನಾನು ಶಾಂತಸ್ವರದಲ್ಲಿಯೇ ನುಡಿದೆನು.

"ಏನು ಬರವಣಿಗೆ! ಸಾಹಿತ್ಯಾಚಾರ್ಯರ ಪಟ್ಟವನ್ನು ಗೆಲ್ಲಲು ಹೊರಟಿರುವ ಹಾಗೆ ತೋರುತ್ತದೆ! ಭಾನುವಾರ ದಿನ ಬಿಡುವಿದೆ; ಸ್ವಲ್ಪ ಉಲ್ಲಾಸವಾಗಿ ಕಾಲವನ್ನು ಕಳೆಯಬಹುದೆಂದು ವಿಚಾರಿಸಿದರೆ........" ಅನಂತರ ಅವಳು ತನ್ನ ಮಾತುಗಳನ್ನು ಮುಂದುವರಿಸಲಿಲ್ಲ.

"ಸೀತು, ಸುಮ್ಮನಿರು; ಹುಡುಗಾಟವನ್ನು ತೋರಿಸಬೇಡ. ನಾನು ಎಷ್ಟು ಮಹತ್ವಾದ ಕಾರ್ಯದಲ್ಲಿ ನಿರತನಾಗಿರುವನೆಂಬುದು ನಿನ್ನ ಮೆದುಳಿನಲ್ಲಿ ಹೊಳೆಯುವುದಿಲ್ಲವಲ್ಲಾ?"

"ಹೊಳೆಯದಿದ್ದರೆ ಬೇಡ; ಈ ದಿನ ಸಿನೇಮಾಕ್ಕೆ ಹೋಗಬೇಡವೇ?"

"ಊ, ಹೂಂ. ಕಾಗೆಯಂತೆ ಶಬ್ದಮಾಡದೆ ಸುಮ್ಮಗಿರಲು ಸಾಧ್ಯವಿಲ್ಲದಿದ್ದರೆ, ಈ ಕೋಣೆಯನ್ನು ತ್ಯಜಿಸಿ ಹೊರಗೆ ಹೋಗು. ನಾನು ಈ ಲೇಖನವನ್ನು ಬರೆದು ಮುಗಿಸುವೆನು."

"ನಾನೇನು ಕಾಗೆಯೇ?" ಎಂದು ಮುಖವನ್ನು ಕೆಂಪು ಮಾಡಿಕೊಂಡು ಅವಳು ಪ್ರಶ್ನಿಸಿದಳು.

"ಸೀತೂ, ನೀನು ಚಿಕ್ಕ ಹುಡುಗಿಯಲ್ಲ; ನಾನೆಷ್ಟು ಮಹತ್ವವಿರುವ ಕೆಲಸದಲ್ಲಿ ನಿರತನಾಗಿರುವೆನೆಂಬುದನ್ನು ಆಲೋಚಿಸು."

"ನಿಮ್ಮ ಕೆಲಸಗಳು ಮಾತ್ರ ಮಹತ್ವವಾದವುಗಳು! ನಾನಾದರೋ ಈ ಹಾಳು ಮನೆಯಲ್ಲಿ ಬಿದ್ದು ಕೊಳೆಯುತ್ತಿರಬೇಕು. ನೀವು ಗಂಡಸರು ಮನಸ್ಸು ಬಂದಂತೆ ತಿರುಗಿ ಸಂಚರಿಸಬಹುದು. ವಾರಕ್ಕೆ ಒಂದು ಸಾರಿ ಸಿನೇಮಾಕ್ಕೆ ಹೋಗೋಣ ವೆಂದರೆ ಊ ಹೂಂ!"

ಅವಳಾದರೋ ಅತ್ಯಂತ ಗೌರವಯುಕ್ತ ಸ್ವರದಲ್ಲಿ ಪಾರ್ಲಮೆಂಟಿನಲ್ಲಿ ಎಂ-ಗ್ಲಂಡ ಬರ್ಕನು ವಾರನ್ ಹೆಸ್ಟಿಂಗ್ಸನ ಮೇಲೆ ಅವನು ಹಿಂದುಸ್ಥಾನದಲ್ಲಿ ಗೈದ ಒಂ-ದೊಂದು ಅಕ್ರಮಗಳನ್ನು ವಿವರಿಸಿ ಆರೋಪಗಳ ಹೊರೆಯನ್ನು ಹೊರಿಸಿದಂತೆ, ನಾನು ಅವಳೊಡನೆ ತೋರಿಸುತ್ತಿರುವ ಅನಾದರಗಳ ಹೊರೆಯನ್ನು ಬಿಚ್ಚಿ ನನ್ನನ್ನು ಅಪರಾಧಿಯಾಗಿ ಮಾಡಿ, ಆರೋಪಗಳನ್ನು ನನ್ನ ಮೇಲೆ ಹೊರಿಸಲಾರಂಭಿಸಿದಳು. ಅವಳ ಆ ನುಡಿಗಳನ್ನು ಕೇಳುವಾಗ ಹೆಂಗಸರು ಯಾವ ಪರಭ್ರಮಣಗಳನ್ನಾಗಲೀ ಹಾವಭಾವಗಳಲ್ಲಿ ವ್ಯತ್ಯಾಸವನ್ನಾಗಲೀ ತೋರಿಸದೆ, ನಗುತ್ತ ಗಂಡಸಿನ ಎದೆಯನ್ನು ತಮ್ಮ ನುಡಿಗಳೆಂಬ ತೀಕ್ಷ್ಣಶರಗಳಿಂದ ತಿವಿಯಬಲ್ಲರೆಂಬ ಸಂಗತಿಯು ನನಗೆ ವೇದ್ಯ ವಾಯಿತು. ಅಂಥ ನುಡಿಗಳು ಅವರ ಕೋಮಲ ಹೃದಯದಿಂದ ಹೇಗೆ ಹೊರಬೀಳು ವವೋ ಎಂಬುದನ್ನು ನಾನು ಬಲ್ಲವನಲ್ಲ.

"ಸೀತಾ, ನೀನು ಒಂದು ಕಲಹಕ್ಕೆ ಬೇಕಾದ ಸನ್ನಾಹಗಳನ್ನು ಮಾಡಿ ಕೊಂಡು ಬಂದ ಹಾಗೆ ತೋರುತ್ತದೆ. ನನ್ನ ಮನಸ್ಸಿಗೆ ಸ್ವಲ್ಪ ಶಾಂತಿಯನ್ನು ನೀಡ ಲಾರೆಯಾ? ಈ ಬರೆಹವನ್ನು ಮುಗಿಸಿಬಿಡುವೆನು."

"ನೀವು ಹಿಡಿದ ಹಟವನ್ನು ಬಿಡುವವರಲ್ಲ. (ಅವಳು ಮಾತ್ರ ಹಟಗಾರ್ತಿ ಯಲ್ಲವಂತೆ!) ೩-೩೦ಕ್ಕಿರುವ ಮ್ಯಾಟನಿಗೆ ಹೋಗೋಣ" ಎಂದು ತಾನು ಹಿಡಿದ ಛಲವನ್ನು ಬಿಡದೆ, ಅವಳು ಒದರಲಾರಂಭಿಸಿದಳು

ಗಂಡಸಿನ ಸಹನಶಕ್ತಿಗೂ ಒಂದು ಎಲ್ಲೆ ಇದೆ. ಆಗ ನನ್ನ ಸಹನಾತ್ಮಕ ಬುದ್ಧಿ ಯು ನಶಿಸಿತು. ಸ್ವಲ್ಪ ಕೋಪವನ್ನು ತಾಳಿ:—"ನೀನು ಶುದ್ಧ ಕತ್ತೆ! ಎಷ್ಟು ಹೇಳಿ ದರೂ ಎಳ್ಳಷ್ಟೂ ತಲೆಯೊಳಗೆ ನುಗ್ಗುವುದಿಲ್ಲ ನನ್ನ ಬರವಣಿಗೆಗೆ ಅಡ್ಡಿಮಾಡದೆ ಇರಲು ಸಾಧ್ಯವಿಲ್ಲದಿದ್ದರೆ ಈ ಕೋಣೆಯನ್ನು ತ್ಯಜಿಸಿ ಹೋಗು." ಎಂದೆನು ನಾನು.

ಅವಳ ಮನಸ್ಸನ್ನು ನೋಯಿಸಬೇಕೆಂದು ವಿಚಾರಿಸಿ ನಾನು ಈ ನುಡಿಗಳನ್ನು ನುಡಿದಿರಲಿಲ್ಲ. ಗಂಡಂದಿರ ಸುಗ್ರೀವಾಜ್ಞೆಯ ನೆರಳಿನಲ್ಲೇ ಹೆಂಗಸು ಬದುಕಬೇಕೆಂಬ ವಿಚಾರದವನೂ ನಾನಲ್ಲ. ಹೆಂಗಸು ಅಡಿಗೆ ಮನೆಯ ತೊತ್ತು ಎಂಬುದಾಗಿಯೂ ನಾನು ಬಗೆದಿರಲಿಲ್ಲ. ಅವಳಿಗೆ ಬೇಕಾದಷ್ಟು ಸ್ವಾತಂತ್ರ್ಯವನ್ನು ನಾನು ನೀಡಿದ್ದೆನು. ನನ್ನ ಪತ್ನಿಯು ಈ ಸಂಸಾರ ನೌಕೆಯನ್ನು ಪರತೀರದಲ್ಲಿ ತಲುಪಿಸುವ ಪ್ರಯತ್ನದಲ್ಲಿ ನನ್ನ ಸಹ ಉದ್ಯಮಿಯಾಗಿರುವಳೆಂದು ವಿಚಾರಿಸಿ, ಈ ತತ್ವವನ್ನು ನನ್ನ ದಿನಚರಿ ಯಲ್ಲಿ ಪ್ರಯೋಗಕ್ಕೆ ತರಲು ನಾನು ಪ್ರಯತ್ನಿಸುತ್ತಲಿದ್ದೆನು; ಆದರೆ ಈ ಸಿದ್ಧಾಂ ತವು ಅವಳ ಮೆದುಳಿನೊಳಗೆ ಪ್ರವೇಶಿಸಲಿಲ್ಲ ಸಿನೇಮಾ-ಸೀರೆ-ಆಭರಣಗಳು

ಇವುಗಳನ್ನು ತ್ಯಜಿಸಿ, ವಿಶಾಲವಾದ ಬಾಹ್ಯ ಪ್ರಪಂಚದಲ್ಲಿ ನನ್ನಂತೆ ವರ್ತಿಸುವ ಚೈತನ್ಯವು ಅವಳಿಗಿರಲಿಲ್ಲ. ನಮ್ಮಿಬ್ಬರಲ್ಲಿಯ ಅಂತರವು ಒಂದು ಕಡಲಿನಷ್ಟು ದೊಡ್ಡದಾಗಿದ್ದಿತು. ನಾನು ಸರಳ ಜೀವನವನ್ನು ಬಯಸುವ ಪ್ರಾಣಿಯಾಗಿದ್ದರೆ, ಆಡಂಬರವು ಅವಳ ಒಡಹುಟ್ಟಿದ ತಂಗಿಯಾಗಿದ್ದಳು. ನನ್ನಲ್ಲಿ ತುಂಟತನದ ಲಕ್ಷಣಗಳಿದ್ದರೂ ನಾನು ಸಿಡುಕು ಸ್ವಭಾವದವನಲ್ಲ, ಶಾಂತತೆಯ ವಾತಾವರಣವನ್ನೇ ಬಯಸುತ್ತಲಿದ್ದೆನು. ಅವಳದು ಸಿಡುಕು ಸ್ವಭಾವ; ಗಂಡಾಂತರಗಳನ್ನೆಬ್ಬಿಸುವ ಮನೋವೃತ್ತಿಗಳಾಗಿದ್ದುವು. ಈ ಎಲ್ಲ ಕಾರಣಗಳಿಂದ ನಮ್ಮ ಸಂಸಾರಸಾಗರದಲ್ಲಿ ಆವಾಂತರು ಗಂಡಾಂತರಗಳ ಬಿರುಗಾಳಿಗಳಿಲ್ಲದೆ ದಿನಗಳನ್ನು ಕಳೆಯಲು ಸಾಧ್ಯವಿಲ್ಲವೆಂಬುದನ್ನು ನಾನು ಬಲ್ಲೆನು.

ನನ್ನ ಈ ರೋಷಾಕುಲದ ಮಾತುಗಳನ್ನು ಕೇಳಿ, ಅವಳು ಕೋಣೆಯನ್ನು ಪರಿತ್ಯಜಿಸಿ ಹೊರಟು ಹೋದಳು. ಅವಳು ಕೋಪಗ್ರಸ್ತೆಳಾಗಿದ್ದಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ನಾನು ಐದು ತಾಸಿಗೆ ಬರವಣಿಗೆಯನ್ನು ಪೂರೈಸಿದೆನು. ನಾನು ಹಾಗೆಯೇ ಅಡಿಗೆಯ ಕೋಣೆಯೊಳಗೆ ತೆರಳಿದೆನು. ಅಡಿಗೆಯವನು ಬಿಸಿ ಕಾಫೀ ತಂದು ಕೊಡಲು ಅದನ್ನು ಕುಡಿದೆನು. ಆ ದಿನದ ಬರವಣಿಗೆ, ಅವಳು ಕಲಹದ ಬೀಜವನ್ನು ಬಿತ್ತಿದ್ದು, ನಾನು ರೋಷಾಕುಲನಾದುದು ಇವುಗಳನ್ನೆಲ್ಲ ವಿಚಾರಿಸುತ್ತ ಆ ಪಾನೀಯವನ್ನು ಗಂಟಲೊಳಗೆ ಇಳಿಸಿದೆನು. ಅವಳು ನನ್ನೊಡನೆ ಕಲಹಿಸಬಾರದಿತ್ತು; ನನ್ನ ತಪ್ಪು ಯಾವುದೂ ಇಲ್ಲ. ನಾನೆಷ್ಟು ಕ್ಷಮಾಶೀಲನಾದರೂ ಆ ಸಹನಾತ್ಮಕ ಬುದ್ಧಿಗೆ ಒಂದು ಎಲ್ಲೆಯಿಲ್ಲವೆ? ಎಂಬುದಾಗಿ ನನ್ನೊಳಗೆ ನಾನೇ ಹೇಳಿಕೊಂಡೆನು

ಅವಳನ್ನು ನಾನು ಮನೆಯೊಳಗೆಲ್ಲ ಹುಡುಕಿದೆನು; ಆದರೆ ಅವಳ ಆ ಕೋಮಲ ಶರೀರವು ಎಲ್ಲಿಯೂ ದೃಗ್ಗೋಚರವಾಗಲಿಲ್ಲ. ಅಂತ್ಯದಲ್ಲಿ ಶಯನಾಗಾರಕ್ಕೆ ಗಮಿಸಿದೆನು ಅವಳು ತನ್ನ ಮುಖವನ್ನು ತಲೆಗಿಂಬಿನಿಂದ ಮುಚ್ಚಿಕೊಂಡು ಅಳುತ್ತಲಿದ್ದಳು. ಹೆಂಗಸರಿಗೆ ಅಳುವುದೆಂದರೆ ಎಷ್ಟು ಸುಲಭವಾದ ಕೆಲಸವಾಗಿದೆ! ಒಂದು ಮಾತು ಕಳೆದು ಎರಡನೇ ಮಾತನ್ನು ಪ್ರಾರಂಭಿಸುವಾಗ ಅವರು ಅತ್ತು ರಂಪು ಮಾಡುತ್ತಾರೆ!

ಹೌದು! ಅಳುವೇ ಹೆಂಗಸರಿಗೆ ಪ್ರಕೃತಿದತ್ತವಾದ ಆಯುಧವಾಗಿದೆ. ಬೇರೆ ಯಾವ ರೀತಿಯಲ್ಲಿಯೂ ಪುರುಷರನ್ನು ಪರಾಭವಗೊಳಿಸಲು ಸಾಧ್ಯವಿಲ್ಲದಿದ್ದರೆ, ಅವರು ಗಂಡಸಿನ ಮೇಲೆ ಈ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾರೆ. ಎಷ್ಟು ಚಾತುರ್ಯ! ಗಂಡಸೆಷ್ಟು ಬಲಶಾಲಿಯಾಗಿದ್ದರೂ, ಎಷ್ಟು ದೃಢಮನಸ್ಕನಾಗಿದ್ದರೂ ತನ್ನ ಮಡದಿಯು ಶೋಕಾಲಾಪನೆಯನ್ನು ಮಾಡುತ್ತಿರುವಾಗ ತಾನು ಗಂಡಸೆಂಬ ವಿಚಾರವನ್ನು ಮರೆತು, ಅವಳ ಮುಂದೆ ತಲೆಯನ್ನು ತಗ್ಗಿಸಿ, ಉದ್ದಂಡ ನಮಸ್ಕಾರ

ವನ್ನು ಗೈದು, ಅವಳ ಬಯಕೆಗಳನ್ನು ಪೂರ್ಣಗೊಳಿಸಲು ಸಿದ್ಧನಾಗುತ್ತಾನೆ! ಇಷ್ಟು ಬಲಶಾಲಿಗಳಾದ ಗಂಡಸುಲೋಕವನ್ನೇ ಆಳುತ್ತಿರುವ ಹೆಂಗಸನ್ನು ಕವಿಗಳೂ ಶಾಸ್ತ್ರಕಾರರೂ 'ಅಬಲೆ'ಯೆಂದು ಸಂಬೋಧಿಸುವದು ಶುದ್ಧ ತಿಳಿಗೇಡಿತನವಾಗಿದೆ.

ನನ್ನ ಪರಿಸ್ಥಿತಿಯೂ ಹಾಗೇ ಆಯಿತು; ಅವಳ ನೇತ್ರಗಳಿಂದ ಹರಿಯುತ್ತಿರುವ ಬಾಷ್ಪಪ್ರವಾಹ-ಎದೆಯಿಂದ ಉಕ್ಕಿಬರುತ್ತಿರುವ ನಿಟ್ಟುಸಿರು-ತೇಜೋವಿಹೀನವಾಗಿರುವ ವದನಮಂಡಲ-ಇವೆಲ್ಲವೂ ನನ್ನ ಎದೆಯಲ್ಲಿದ್ದ ದೃಢತೆಯನ್ನು ಚಂಚಲಗೊಳಿಸಿದುವು. ಅನುತಾಪಪರಿಪೂರ್ಣವಾದ ಸ್ವರದಲ್ಲಿ. "ಸೀತಾ!'' ಎಂದೆನು ನಾನು.

ಅವಳು ಮಾತಾಡಲಿಲ್ಲ; ಬೆತ್ತದಿಂದ ಏಟುಗಳನ್ನು ತಿಂದವಳ ಹಾಗೆ ಇನ್ನಷ್ಟು ಪ್ರಬಲವಾಗಿ ಅವಳು ರೋಧಿಸಲಾರಂಭಿಸಿದಳು. ಹೇಗಿದೆ ಅವಳ ಉಪಾಯವೆಂಬುದನ್ನು ನೋಡಿರಿ!

''ನೀನೇಕೆ ಅಳುತ್ತಿರುವೆ?''

ಪುನಃ ಮೌನ. ನಾನು ಅವಳ ಕರಗಳನ್ನು ಹಿಡಿದು ಮಲಗಿದಲ್ಲಿಂದ ಎಬ್ಬಿಸಿದೆನು. ಆ ಸುಂದರವಾದ ಕಪೋಲಗಳು ಕಂಬನಿಗಳಿಂದ ನೆನೆದು ಹೋಗಿರುವದನ್ನು ಕಂಡು ನನಗೆ ಅತ್ಯಂತ ಸಂಕಟವಾಯಿತು ನನ್ನ ಶಾಲಿನಿಂದ ಅವಳ ಕಣ್ಣುಗಳನ್ನೂ, ಮುಖವನ್ನೂ ಒರಸಿದೆನು. ಹೌದು, ಪಾಪ! ಹುಡುಗಿಯು ಸಿನೇಮಾಕ್ಕೆ ತೆರಳಬೇಕೆಂದು ಆಗ್ರಹಿಸುವದು ಸಹಜವು! ಅವಳ ಆಗ್ರಹಗಳನ್ನು ನಿವೃತ್ತಗೊಳಿಸುವದರ ಬದಲು, ಕತ್ತೆ ಎಂಬುದಾಗಿ ಅವಳನ್ನು ಬೈದದ್ದು ಉಚಿತವಲ್ಲವೆಂದು ನನ್ನಲ್ಲಿ ನಾನೇ ಹೇಳಿಕೊಂಡೆನು

"ಸೀತಾ! ಅದೇಕೆ ಅಳುತ್ತಿರುವೆ?''

'ಹೂಂ, ಬೇಕಾದ ಹಾಗೆ ನೋವು ಮಾಡಿದ ನಂತರ, ಅದೇಕೆ ಅಳುತ್ತಿರುವೆ? ಎಂದು ನುಡಿಯುವ ನೀವೆಷ್ಟು ಕರುಣವಂತರು! ನಿಮ್ಮ ಎದೆಯು ಇಷ್ಟು ಕಲ್ಲೆಂದು..' ಎಂದು ತನ್ನ ಮಾತುಗಳ ಬಾಣಗಳನ್ನು ಸೀತೆಯು ನನ್ನ ಮೇಲೆ ಪ್ರಯೋಗಿಸಿದಳು.

''ಸೀತೂ-ನಾನು ಮನಃಪೂರ್ವಕವಾಗಿ ಮಾಡಿದುದೇನು? ನೀನೆಷ್ಟು ತೀವ್ರವಾಗಿ ನನ್ನ ಮನಶ್ಶಾಂತಿಯನ್ನು ಕಲ್ಲೋಲ ಮಾಡಿದೆ ಎಂಬುದನ್ನು ಆಲೋಚಿಸು!"

''ಸಾಕು; ನಿಮ್ಮ ವೇದಾಂತವು ನನಗೆ ಬೇಡ!"

'ನಾನು ಬರವಣಿಗೆಯಲ್ಲಿ ಎಷ್ಟು ಮಗ್ನನಾಗಿದ್ದೆನೆಂಬುದನ್ನು ತಿಳಿದಿರುವೆಯಾ?''

"ನಿಮ್ಮ ಬರವಣಿಗೆ ಸುಟ್ಟು ಹೋಗಲಿ!"

''ಹಾಗೆ ಹೇಳದಿರು! ಕಳೆದುದನ್ನು ಮರೆತುಬಿಡೋಣ."

''ನೀವು ಈ ರೀತಿ ನನ್ನನ್ನು ಸಂಕಟಪಡಿಸಬಾರದು!"

''ಇಲ್ಲ. ಈಗಲೂ ನಾನು ಬೇಕೆಂದು ಮಾಡಿದುದಲ್ಲ. ತೀಕ್ಷ್ಣವಾದ ಬುದ್ಧಿಯುಳ್ಳವಳು ನೀನಲ್ಲವೇನು? ಇದು ನಿನಗೆ ಹೊಳೆಯದೆ!'' ಎಂದು ಆ ಯುದ್ಧವನ್ನು ಅಂತ್ಯಗೊಳಿಸಲು ಆತುರನಾಗಿ ನಾನು ಹೇಳಿದೆನು.

ಅವಳು ಕ್ರಂದಿಸುವುದನ್ನು ಬಿಟ್ಟು ಹಾಸಿಗೆಯಿಂದ ಎದ್ದಳು; ನಾನು ಅವಳನ್ನಪ್ಪಿಕೊಂಡು ಸಂತೈಸಿದೆನು; ಅವಳು ಬಂದು ಮಂದಹಾಸವನ್ನು ಬೀರಿ, ನನ್ನಲ್ಲಿದ್ದ ಸಂತಾಪವನ್ನು ಹೋಗಲಾಡಿಸಿದಳು!

ಆ ದಿನ ನಾವು ಸಿನೇಮಾಕ್ಕೆ ತೆರಳಿದೆವು; ಅವಳ ಈ ಚಲಚ್ಚಿತ್ರಗಳ ಹುಚ್ಚು ಯಾವಾಗ ಹೋಗುವುದೋ, ದೇವರೇ ಬಲ್ಲ!

[ ೧೨ ]

ದಿನಗಳು ಕಳೆದಂತೆ ನಮ್ಮ ದಾಂಪತ್ಯಜೀವನವು ಅತ್ಯಂತ ಕ್ಲೇಶದಾಯಕವಾಗಿ ಪರಿಣಮಿಸಿತು. ಅದು ಕಲಹಗಳ ಕಡಲಾಗಿ ಪರಿಣಮಿಸಿತೆಂದು ಹೇಳಬಹುದು. ಪ್ರತಿಯೊಂದು ಚಿಕ್ಕ ಕಾರ್ಯಕ್ಕಾಗಿ ಅತ್ಯಂತ ಕಠಿಣವಾದ ಮಾತುಗಳನ್ನು ಹೇಳಿ ಪರಸ್ಪರರು ಹೋರಾಡುವುದು ಸರ್ವಸಾಧಾರಣವಾಗುತ್ತ ಬಂದಿತು. ಇದಕ್ಕೆ ಕಾರಣಗಳು ಯಾವವೂ ಇಲ್ಲ. ನಮ್ಮಿಬ್ಬರ ದಾರಿಗಳು ಬೇರಿಯಾಗಿದ್ದವು ಎಂದು ಮಾತ್ರವಾಗಿದೆ. ಅವಳ ಹೃದಯದಲ್ಲಿ ತುಂಬಿರುವ ಆಗ್ರಹಗಳು, ಆಶೆ ಇವುಗಳು ನನ್ನದಕ್ಕಿಂತ ಭಿನ್ನವಾಗಿದ್ದುವು. ಈ ವಿರುದ್ಧಸ್ವಭಾವಗಳ ಅಂತರವೇ ಕಲಹಗಳ ನದಿಯಾಗಿ ನಮ್ಮ ದಾಂಪತ್ಯ ಜೀವನದಲ್ಲಿ ರೂಪವನ್ನು ಹೊಂದಿತು.

ನಾನು ಒಂದು ದಿನ ಪತ್ರಿಕೆಯನ್ನು ಓದುತ್ತ ಕುಳಿತಿರುವಾಗ ಅವಳು ನನ್ನ ಹತ್ತಿರ ಬಂದು:—"ಹತ್ತಿರದ ಮನೆಯ ಮೀನಾಕ್ಷಮ್ಮನನ್ನು ಕಂಡಿರಾ? ಅವರ ಯಜಮಾನ್ರು ೯೦ ರೂಪಾಯಿ ಸಂಬಳದವರಾಗಿದ್ದರೂ ಮೀನಾಕ್ಷಮ್ಮನಿಗೆ ಎಷ್ಟು ರತ್ನಾಭರಣಗಳನ್ನು ಮಾಡಿಸಿಕೊಟ್ಟಿದ್ದಾರೆ?" ಎಂದಳು.

ಈ ಮಾತುಗಳ ಅರ್ಥವು ಹತ್ತುನೂರು ರೂಪಾಯಿಗಳ ವರಮಾನವಿರುವ ನಾನು, ಮಹತ್ಕೃಪಣನೂ ಲೋಭಿಯೂ ಆಗಿರುವೆನೆಂದು ಮಾತ್ರವಾಗಿದೆ. ನಾನು: "ಅದರಿಂದೇನು?" ಎಂದು ಅನಾಸಕ್ತಿಭರಿತನಾಗಿ ಪ್ರಶ್ನಿಸಿದೆನು.

"ನೀವು ನನಗೆ ಒಂದು ಪದಕವನ್ನು ಸಹ ಮಾಡಿಸಲಿಲ್ಲ!" ಎಂದು ನನ್ನನ್ನು ಹಿಯ್ಯಾಳಿಸುವ ಧ್ವನಿಯಲ್ಲಿ ಅವಳು ನುಡಿದಳು

"ಆಭರಣದಿಂದ ಯಾವ ಪ್ರಯೋಜನ? ಅದನ್ನು ಧರಿಸುವುದರಿಂದೇನು ಸಿಗುತ್ತದೆ?"

"ಎಲ್ಲರೂ ಏಕೆ ಧರಿಸುವರು? ಆ ಆಭರಣಧಾರಣದಿಂದ ಆನಂದಪಡುವುದಕ್ಕಾಗಿ!" ಎಂದು ತನ್ನ ಕಣ್ಣುಗಳನ್ನು ಹೊರಳಿಸುತ್ತ ಅವಳು ನುಡಿದಳು.

"ಬಂಗಾರದ ಮುದ್ದೆಯೊಂದನ್ನು ಕೊರಳಲ್ಲಿ ನೇತು ಹಾಕುವದರಿಂದ ಯಾವ ಸುಖವಿದೆ? ಶರೀರವನ್ನು ಹೊಳೆಯುವ ಲೋಹಗಳಿಂದ ಆವರಿಸುವುದು ಚೆಲುವೆಂಬುದಾಗಿ ನೀನು ಭಾವಿಸಿರುವೆಯಾ?"

"ಆಭರಣಗಳನ್ನು ಧರಿಸುವುದು ಅಲಂಕಾರವಲ್ಲವೇನು?" ಎಂದು ಸೀತೆಯು ಓರೆಗಣ್ಣಿನಿಂದ ನನ್ನನ್ನು ನೋಡುತ್ತ ನುಡಿದಳು.

"ಅಲಂಕಾರವೇನು? ಅದರಿಂದೇನು ಪ್ರಯೋಜನ? ನನಗೆ ಈ ಅಲಂಕಾರಗಳಲ್ಲಿ ಆಸಕ್ತಿಯಿಲ್ಲ. ಈ ಚಿನ್ನದ ಮುದ್ದೆಗಳಿಗಾಗಿ ಧನವನ್ನು ವ್ಯಯಗೊಳಿಸಲು ನಾನು ಸಿದ್ಧನಿಲ್ಲ. ಮನುಷ್ಯನಿಗೆ ಅಲಂಕಾರವು ಅವನ ಸ್ವಭಾವಗಳಾಗಿರುತ್ತವೆ. ನೀನು ಈ ಒಡವೆಗಳನ್ನು ಬಯಸುವುದು ಅದರ ಹೊಳಪಿನಿಂದ ಬೀದಿಯ ಜನರ ದೃಷ್ಟಿಯನ್ನು ಸೆಳೆಯುವುದಕ್ಕಾಗಿಯೇನು?"

ನನ್ನ ಈ ಮಾತುಗಳು ಕಠಿಣವಾಗಿದ್ದುವೆಂಬುದರಲ್ಲಿ ಸಂಶಯವಿಲ್ಲ. ಬಾಲ್ಯದಿಂದಲೇ ನನ್ನ ಸ್ವಭಾವವನ್ನು ಅವಲೋಕಿಸಿರುವ ವಾಚಕರು ನನ್ನ ಸ್ವಭಾವವು ಆ ತರದ್ದೆಂದು ತಿಳಿದಿರಬಹುದು.

"ನೀವು ಆಭರಣವನ್ನು ಮಾಡಿಸಿ ಕೊಡದಿದ್ದರೆ ಬೇಡ. ಈ ರೀತಿಯ ಮಾತುಗಳನ್ನು ಹೇಳಬೇಕೆ?" ಎಂದು ಅವಳು ಅಳುಮೋರೆಯಿಂದ ನುಡಿದಳು.

ಮಾತು ಮಾತಿಗೆ ಕಣ್ಣೀರು! ಹೆಂಗಸರ ಜಾಲವನ್ನು ನೋಡಿರಿ! ನಾವು ಅವರಿಗೆ ಸ್ವಾತಂತ್ರ್ಯವಿಲ್ಲವೆಂದೂ ಬಲಹೀನೆಯರೆಂದೂ ನುಡಿಯುವುದು ಕೇವಲ ಅಸಂಬದ್ಧವಾಗಿವೆ. ಅವರು ಕಣ್ಣೀರಿನ ಗದೆಯನ್ನು ಹಿಡಿದುಕೊಂಡು ಪುರುಷ ಪ್ರಪಂಚವನ್ನೇ ಇಂದು ಆಳುತ್ತಲಿದ್ದಾರೆ!

ಈ ಹಾಳು ಆಭರಣಗಳ ಹುಚ್ಚು ನಮ್ಮ ಹೆಂಗಸರಿಗೆ ಎಷ್ಟರಮಟ್ಟಿಗೆ ಇರುವದೆಂದು ವಿವರಿಸಲು ಸಾಧ್ಯವಿಲ್ಲ ಹೀಂದೂ ಹೆಂಗಸರು ದರಿದ್ರರಾದ ತಮ್ಮ ಗಂಡಂದಿರನ್ನು ಯಾವ ರೀತಿ ಕಾಡುತ್ತಿರುವರೆಂಬುದನ್ನು ನಾನಿಲ್ಲಿ ವರ್ಣಿಸಲಾರೆನು.

ನನ್ನ ಈ ನುಡಿಗಳಿಂದ ಸೀತೆಯ ಮನಸ್ಸು ಅತ್ಯಂತ ಶೋಕಭರಿತವಾಯಿತೆಂದು ಹೇಳಬೇಕಾದುದಿಲ್ಲ ಮನೆಯಲ್ಲಿ ನನ್ನೊಡನೆ ಸಲಿಗೆಯಾಗಿ ಮಾತಾಡಳು, ನನ್ನನ್ನು ನೋಡುವಾಗ ಅವಳ ಮೋರೆಯು ಉರಿಯುತ್ತಲಿದ್ದಿತು ಒಂದು ಹುಲಿಯನ್ನು ನೋಡುವ ಹಾಗೆ ಅವಳು ನನ್ನನ್ನು ವೀಕ್ಷಿಸುತ್ತಲಿದ್ದಳು.

ನಮ್ಮಿಬ್ಬರ ನಡುವೆ ಅಗಲವಾದ ಸಮುದ್ರವು ನಿಂತಿದೆ ಸರಳತೆ ಮತ್ತು ಆಡಂಬರಶೂನ್ಯತೆಗಳು ನನ್ನ ಪ್ರೀತಿಯ ವಸ್ತುಗಳಾಗಿದ್ದರೆ, ಆಡಂಬರವೂ ಕೃತ್ರಿಮ ಜೀವನವೂ ಅವಳಿಗೆ ಅತ್ಯಂತ ರಮಣೀಯವಾಗಿ ತೋರುತ್ತಲಿವೆ. ಒಂದೇ ಮನೆಯಲ್ಲಿ, ಒಂದೇ ಮಾಡಿನ ಕೆಳಗೆ ನಾವಿಬ್ಬರೂ ಜೀವಿಸುತ್ತಿರುವೆವೆಂಬುದು ವಾಸ್ತವವು; ದಿನವೂ ಒಬ್ಬರನ್ನೊಬ್ಬರು ನೋಡುತ್ತಿರುವೆವು; ಆದರೆ ಆ ಜೀವನವು ನಮ್ಮ ಎದೆಯಲ್ಲಿ ಸದಾ ವಿರೋಧವು ಪ್ರಜ್ವಲಿಸುವಂತೆ ಮಾಡುತ್ತಿರುವುದು. ವಿವಾಹವೆಂದರೆ, ವಿಭಿನ್ನಾಭಿಪ್ರಾಯಗಳ, ಭಿನ್ನರುಚಿಗಳ ಸ್ತ್ರೀ-ಪುರುಷರ ಮಿಲನವಾಗಿದೆ. ಆ ಬದುಕಿನಲ್ಲಿ ವಿಷಯವಾಸನಾಸಂತೃಪ್ತಿ,-ಹೃದಯ ದೌರ್ಬಲ್ಯ ಇವುಗಳಿಗಿಂತ ಹೆಚ್ಚಿನ ಮಹತ್ವವಾವುದೂ ನನಗೆ ಕಾಣುವುದಿಲ್ಲ.

ನಿವಾರಣೆಗೆ ಎರಡು ದಾರಿಗಳಿವೆ. ಒಂದು ಭೀಮಸೇನನಂತೆ ಕೈಯಲ್ಲಿ ಗದೆಯನ್ನು ಹಿಡಿದು, ಅವಳಿಗೆ ಭಯವನ್ನು ತೋರಿಸಿ, ಹೆಂಗುಸನ್ನು ತನ್ನ ದಾಸಿಯು

ನ್ನಾಗಿ ಮಾಡುವದು. ಎರಡನೆಯ ದಾರಿ-ತನ್ನ ವಿಚಾರ, ಅಭಿಮಾನ ಇವುಗಳನ್ನು ಒಂದು ಮೂಟೆ ಮಾಡಿ ಒಂದು ಮೂಲೆಯಲ್ಲಿಟ್ಟು, ಹೆಂಡತಿಯ ಇಷ್ಟಪೂರ್ತಿಗಾಗಿ ಮರು ಮಾತಾಡದೆ ಆಂಜನೇಯನಂತೆ ವರ್ತಿಸಲು ಸನ್ನದ್ಧನಾಗಿರುವುದು. ಮೊದಲನೆಯದು ಮನುಷ್ಯನ ರಾಕ್ಷಸ ಸ್ವಭಾವವನ್ನು ಲೋಕಕ್ಕೆ ತೋರಿಸುತ್ತಲಿದ್ದರೂ, ಎರಡನೆಯದು ಅವನು ನಾಯಿಗಿಂತ ಮಿಗಿಲಲ್ಲವೆಂಬುದನ್ನು ಸಾರುತ್ತಲಿರುವದು. ಈ ಎರಡು ಮಾರ್ಗವನ್ನು ಅನುಸರಿಸಲೂ ನನ್ನ ಮನಸ್ಸು ಒಡಂಬಡಲಿಲ್ಲ. ನನ್ನ ಹಾಗಿರುವ ಒಂದು ನರಜೀವಿಯನ್ನು ಶಾರೀರಿಕ ಬಲದಿಂದ ದಾಸಿಯನ್ನಾಗಿ ಮಾಡುವುದನ್ನು ವಿಚಾರಿಸುವಾಗ, ನನ್ನ ಮೈಮೇಲಿನ ರೋಮಗಳು ಎದ್ದು ನಿಲ್ಲುತ್ತಲಿರುವವು. ಹಾಗಲ್ಲದೆ ಮರುಮಾತಾಡದೆ ಅವಳ ಇಚ್ಛಾನುಸಾರ ವರ್ತಿಸಲು ನನ್ನ ಅಭಿಮಾನ-ಉದ್ದೇಶಗಳು ಒಪ್ಪುತ್ತಿರಲಿಲ್ಲ.

ಮೇಲೆ ಸಕ್ಕರೆಯನ್ನು ಲೇಪಿಸಿದ ಕೊಯಿನಾ ಗುಳಿಗೆಯಾಗಿದೆ ದಾಂಪತ್ಯಜೀವನವು! ಕಲಹ, ಈರ್ಷಭಾವ, ಅಸೂಯೆ ಎಂಬೀ ಭೂತಗಳು ಯಾವಾಗಲೂ ನಮ್ಮೆದೆಯಲ್ಲಿ ಕುಣಿಯುತ್ತಲಿರುವವು. ಸಂದೇಹ, ಶಂಕೆಗಳ ಪಿಶಾಚಗಳು ಮನುಷ್ಯನ ಬೆನ್ನನ್ನು ಬಿಡವು. ನಿವಾರಣೆಗೆ ಒಂದೇ ದಾರಿ ''ಜೈ ಸೀತಾರಾಮ್'' ಎಂದು ಸರ್ವಸಂಗಗಳನ್ನು ಪರಿತ್ಯಜಿಸಿ ಸಂನ್ಯಾಸಿಯಾಗುವದು ದುರ್ದೈವವಶಾತ್ ಆ ಎದೆಗಾರಿಕೆಯು ನನಗಿಲ್ಲ.

ಸೀತೆಗೆ ಪದಕವನ್ನು ಮಾಡಿಸಿಕೊಟ್ಟೆನು. ಆ ಆಭರಣವನ್ನು ಕಂಠದಲ್ಲಿ ಧರಿಸುವಾಗ ಅವಳ ವದನದಿಂದ ಹೊರಚೆಲ್ಲುತ್ತಿರುವ ಆ ಸಂತೋಷವನ್ನು ಹೇಗೆ ಮರೆಯಲಿ! ಸಾತ್ವಿಕತನದ ರಂಗು ಅದಕ್ಕಿಲ್ಲ, ತಾಮಸತನದ ಹರ್ಷವದಾಗಿದ್ದಿತು. ಹೊನ್ನು-ಮಣ್ಣುಗಳಿಂದ ಮನುಷ್ಯನಿಗುಂಟಾಗುವ ಆಹ್ಲಾದವು ಕೇವಲ ಆಸುರತೆಯದ್ದಾಗಿದೆ. ಹೊನ್ನು-ಮಣ್ಣುಗಳಿಗಾಗಿ ಕಾತರಿಸುತ್ತಿರುವ ಹೃದಯವು ಎಷ್ಟು ಭಯಂಕರವೆಂದು ನಾನು ವಿವರಿಸಲು ಶಕ್ತನಲ್ಲ. ಆ ಭೀಕರದ ಆಶೆಯಿಲ್ಲದ ಹೆಂಗುಸೇ ಜಗತ್ತಿನಲ್ಲಿ ಧನ್ಯಳು! ಹೌದು, ನಾನು ಸೀತೆಗೆ ಪದಕವನ್ನು ಮಾಡಿಸಿ ಕೊಟ್ಟೆನು; ಅವಳ ಆಜ್ಞೆಗೆ ನಾನು ದಾಸನಾದೆನು. ಪುರುಷನು ಎಷ್ಟು ದೃಢಮನಸ್ಕನೂ ಬಲಶಾಲಿಯೂ ಆಗಿದ್ದರೂ ಅವನನ್ನು ಆಳುತ್ತಿರುವವಳು ಹೆಂಗುಸಾಗಿರುತ್ತಾಳೆ. ಗಂಡಂದಿರೆಂದರೆ, ಯಾರು? ತಮ್ಮ ಹೆಂಡಂದಿರಿಗಾಗಿ ತಮ್ಮ ಸ್ವಂತ ವಿಚಾರ, ಬಯಕೆ, ಆಗ್ರಹ ಇವುಗಳನ್ನು ತ್ಯಾಗ ಮಾಡಲು ಸನ್ನದ್ಧರಾಗಿರುವ ಬಡಪ್ರಾಣಿಗಳು! ಅವರ ಸ್ಥಿತಿ-ಗತಿಗಳನ್ನು ಆಲೋಚಿಸುವಾಗ, ಹಲವು ಸಾರೆ ನನ್ನ ಕಣ್ಣುಗಳಲ್ಲಿ ಬಾಷ್ಪಗಳು ತುಂಬುವವು. ಏಕೆಂದರೆ, ಆ ತೀವ್ರ ಯಾತನೆಗಳನ್ನು ಅನುಭವಿಸುತ್ತಿರುವವರಲ್ಲಿ ನಾನೂ ಒಬ್ಬನಾಗಿರುವೆನು!

ಈ ಮಾತುಗಳಿಂದ ನಾನು ಸ್ತ್ರೀ ವಿದ್ವೇಷಿಯೆಂಬುದಾಗಿ ಯಾರೂ ವಿಚಾರಿಸಬಾರದು. ಹೆಂಗುಸು-ತನ್ನ ಜೀವನದ ಆದರ್ಶವನ್ನು, ಪ್ರೇಮದ ನೈಜರೂಪವನ್ನು

ತಿಳಿದ ನಾರಿಯು ಅತ್ಯಂತ ಪರಿಶುದ್ಧಳೆಂದು ನಾನು ಭಾವಿಸುತ್ತೇನೆ. ಆ ಆದರ್ಶ ಲಲನೆಯನ್ನು ನಾನು ಭಕ್ತಿಪುರಸ್ಸರವಾಗಿ ವೀಕ್ಷಿಸುತ್ತೇನೆ. ಅಂಥವರಲ್ಲಿ ನಮ್ಮ ಅತ್ತಿಗೆಯೂ ಒಬ್ಬಳಾಗಿದ್ದಾಳೆ! ಅವಳಲ್ಲಿರುವ ಆ ಗುಣಗಳು ನನ್ನ ಕೈಹಿಡಿದವಳಲ್ಲಿ ಇಲ್ಲದಿರುವಾಗ ನನ್ನ ಜೀವನವು ಹೇಗೆ ತಾನೇ ಸುಖಪ್ರದವಾಗುವುದು?

ಕಲಹಗಳು, ಅನುರಾಗ ಇವುಗಳ ಸಮ್ಮಿಲನದಿಂದ ಆ ದಿನಗಳು ಸುಖದ ಬಿಸಿಲು, ಶೋಕದ ರಾತ್ರಿ ಇವುಗಳಿಂದ ಕೂಡಿದವುಗಳಾಗಿದ್ದುವು. ಆ ಎರಡು ವ್ಯತ್ಯಸ್ತಭಾವಗಳು ಒಂದು ಚಿತ್ರದ ಎರಡು ಭಾಗಗಳಾಗಿರುತ್ತವೆ. ಏಕೆಂದರೆ, ಅನುರಾಗವೆಂಬುದು-ಅದನ್ನು ಪರಿಶುದ್ಧವೆಂದೂ ಶ್ರೇಷ್ಠವೆಂದೂ ಕವಿಗಳು ಚಿತ್ರಿಸುತ್ತಿರುವರು-ಕೇವಲ ನಮ್ಮ ವಿಕಾರಗಳ ಫಲವಾಗಿ ತೋರಬರುವ ಒಂದು ಕಾಹಿಲೆಯಾಗಿದೆ. ಮನುಷ್ಯನಲ್ಲಿ ತೋರುವ ವಿಷಯವಾಸನೆಯು ಮೃಗೀಯ ಭಾವನೆಯ ಸಂತೃಪ್ತಿಸಾಧನವು ಅನುರಾಗವಾಗಿದೆ. ಅನುರಾಗವು ನಿಜವಾಗಿಯೂ ಪವಿತ್ರಸಾಧನೆಯಾಗಿದ್ದರೆ, ಕೋಪ, ಲಜ್ಜೆ, ಆಯಾಸ ಇವುಗಳು ಮನುಷ್ಯನಲ್ಲಿ ಉದಯವನ್ನು ಹೊಂದಲು ಕಾರಣವಿಲ್ಲ ಈ ಬಲಹೀನತೆಗಳು ಮನುಷ್ಯನ ಅವಿವರ್ತನೆಯ ಲಕ್ಷಣಗಳಾಗಿರುತ್ತವೆ. ಹೌದು, ನಾವಿಬ್ಬರೂ ನಮ್ಮಲ್ಲಿರುವ ಚೈತನ್ಯದ ಮಹತ್ವವನ್ನರಿಯದೆ, ಅದನ್ನು ದುರುಪಯೋಗಪಡಿಸುತ್ತಿರುವೆವು ಆ ಕ್ರಮಾತೀತ ಕೆಲಸದಿಂದ ನಮ್ಮ ಮನಸ್ಸುಗಳು ಕುಂಠಿತಭಾವವನ್ನು ತಾಳಿ, ಸಿಟ್ಟು, ಲಜ್ಜೆ, ಅಸೂಯೆ, ಬಳಲಿಕೆ ಎಂಬ ಮೋಡಗಳಿಂದಾವೃತವಾಗುತ್ತಲಿರುವವು. ಜೀವನದ ರಹಸ್ಯವನ್ನರಿಯದಿರುವುದೇ-ನಮ್ಮಲ್ಲಿ ತಾಂಡವವಾಡುತ್ತಿರುವ ವಿಷಯವಾಸನೆಯೇ-ಈ ಎಲ್ಲ ಗಂಡಾಂತರಗಳಿಗೆ ಮೂಲ ಕಾರಣಗಳಾಗಿರುತ್ತವೆ.

ನನ್ನ ದಾಂಪತ್ಯಜೀವನವು ಸುಖಪ್ರದವಾಗಲಿಲ್ಲ; ಇದಕ್ಕೆ ಅವಳ ಅಪರಿಪಕ್ವತೆ ಮತ್ತು ಆಡಂಬರಗಳೇ ಕಾರಣಗಳೆಂದು ನಾನು ನಿರ್ಧರಿಸಿದೆನು. ಆ ರೀತಿ ಅವಳನ್ನು ಆರೋಪಿಸಲು ನಾನು ಹಿಂಜರಿಯುತ್ತಿಲ್ಲ ಸಾಧಾರಣ ಹೆಂಗಸರಲ್ಲಿ ತೋರುತ್ತಿರುವ ಆಸಕ್ತಿ, ಬಯಕೆಗಳೇ ಅವಳಲ್ಲಿದ್ದುವು ಎಂಬುದನ್ನು ಈಗ ನಾನು ಬಲ್ಲೆನು ಅವಳು ದಾಂಪತ್ಯಜೀವನ ರಹಸ್ಯವನ್ನು ತಾನು ಮಾಡಬೇಕಾದ ಕರ್ತವ್ಯಗಳನ್ನೂ ಅರಿತಿರಲಿಲ್ಲ ನಮ್ಮ ಹಿರಿಯರಾದರೂ ಹೆಣ್ಣುಮಕ್ಕಳಿಗೆ ಅವರು ಭಾವೀ ಜೀವನದಲ್ಲಿ ಹೊರಬೇಕಾಗಿ ಬರುವ ಭಾರವನ್ನೂ ದಾಂಪತ್ಯಜೀವನವೆಂದರೆ, ಭಾವೀ ಜನಾಂಗದ ರಚನೆಯ ಪಾವನ ಕರ್ಮವೆಂದೂ ಸ್ವಾತ್ಮಪ್ರಕಾಶದ ದಾರಿಯೆಂದೂ ತಿಳಿಸಿ ಬೆಳಕನ್ನು ತೋರಿಸುವುದಿಲ್ಲ. ಆದುದರಿಂದಲೇ ನಮ್ಮ ಹೆಂಗಸರು ಅವರ ಜೀವನದ ಗುರಿಯನ್ನರಿಯದೆ ಈ ರೀತಿ ಸಂಕಟಕ್ಕೊಳಗಾಗುತ್ತಿರುವುದಲ್ಲದೆ, ತಮ್ಮ ಗಂಡಂದಿರನ್ನೂ ಕೆಸರಿನ ಕೂಪದಲ್ಲಿ ತಳ್ಳುತ್ತಲಿರುವರು.

ಹೀಗೆ ಕೆಲವು ತಿಂಗಳುಗಳು ಗತಿಸಿದುವು. ಅವಳು ಗರ್ಭವನ್ನು ಧರಿಸಿದಳು. ನನ್ನಾಕೆಯನ್ನು ನಾನು ಸ್ವಂತ ಊರಿಗೆ ಕಳುಹಿಸಿದೆನು. ಆದರೊಡನೆ ನನ್ನ ಗೃಹ

ಚಾರವು ಸ್ವಲ್ಪ ಕಡಿಮೆಯಾಯಿತೆಂದು ಹೇಳಬಹುದು. ಮೊದಲಿನ ಹಾಗೆ ನನ್ನ ಕೆಲಸಗಳ ದಾರಿಯಲ್ಲಿ ಒಂದು ಮುಳ್ಳಿನ ಹಾಗೆ [illegible] ಅವಳ ತೊಂದರೆಯು ಸ್ವಲ್ಪ ಕಾಲಕ್ಕೆ ತಪ್ಪಿತು.

ಬರವಣಿಗೆ, ವಾಯುಸಂಚಾರ ಇವುಗಳಿಂದ ನಾನು ಬಾಲ್ಯಕಾಲದಲ್ಲಿದ್ದ ಹರ್ಷ ಮತ್ತು ಉನ್ಮೇಷಗಳನ್ನು ಮರಳಿ ಪಡೆದೆನು ಜೀವನವು ಸ್ವಲ್ಪ ಹಗುರವಾಯಿತು. ಮೊದಲು ಆಫೀಸಿನಿಂದ ಮನೆಗೆ ಹಿಂದಿರುಗಿ ಬರುವಾಗ, ನನ್ನ ಪತ್ನಿಯು ಹೊಸದಾಗಿ ನಿರ್ಮಿಸುತ್ತಿರುವ ಕದನದಲ್ಲಿ ಜಯವನ್ನು ಹೊಂದುವದು ಹೇಗೆ? ಎಂಬುದನ್ನು ಕುರಿತು ನನ್ನ ಬುದ್ಧಿಯನ್ನು ವಿನಿಯೋಗಿಸಬೇಕಾಗಿ ಬರುತ್ತಿದ್ದಿತು. ಈಗ ಹಾಗಲ್ಲ. ಜ್ಞಾನಾರ್ಜನೆಯಲ್ಲಿ, ತಿಳಿವು ಸಂಪಾದಿಸುವಹರಲ್ಲಿ ನನ್ನ ಬುದ್ಧಿಯನ್ನು ಪಯೋಗಿಸಲು ಸಮಯವು ದೊರಕಿತು.

ಹೀಗಿರಲು ಬೊಂಬು ಬಿದ್ದ ಹಾಗೆ ಬಂದಿತು,- ನನ್ನ ಅತ್ತಿಗೆಯ ಕಾಗದ. ನಾನು ಮಹಾಪರಾಧಿಯಾಗಿದ್ದೇನೆಂಬುದು ಆ ಕಾಗದದಲ್ಲಿ ಹೊಳೆಯುತ್ತಲಿದ್ದಿತು. ಕಾಗದದ ಸಾರಾಂಶವಿದು:

"ಶೀನು,

ಸೀತು-ಅವಳಿನ್ನೂ ಚಿಕ್ಕ ಪ್ರಾಯದವಳು. ನಿನ್ನ ಆದರ್ಶಗಳನ್ನು ಗ್ರಹಿಸುವಷ್ಟು ಅವಳ ಬುದ್ಧಿಯು ಪಕ್ವವಾಗಿರುವದಿಲ್ಲ. ನಿನ್ನ ಮಾತುಗಳಂತೆ ನಡೆಯುವದಕ್ಕೆ ಅವಳೊಡನೆ ಕಲಹಿಸಿ,-ಕೋಮಲವಾದ ಅವಳ ಎದೆಯನ್ನು ಗಾಯಪಡಿಸುವದನುಚಿತವು. ಇನ್ನು ಮುಂದೆ ಆ ರೀತಿ ಸಂಭವಗಳಿಗೆ ಸ್ಥಳವನ್ನು ಕೊಡಬೇಡ. ಅವಳೀಗ ಆರೋಗ್ಯದಲ್ಲಿದ್ದಾಳೆ.

ಎಲ್ಲರಿಗೂ, ನನಗೂ, ರಾಮುವಿಗೂ ಸೌಖ್ಯ. ನಿನ್ನ ಕ್ಷೇಮವಾರ್ತೆಯನ್ನು ತಿಳಿಸು.

ನಿನ್ನ ಅತ್ತಿಗೆ
ನಾಗರತ್ನ"

ಅತ್ತಿಗೆಯ ಈ ಪ್ರೇಮಪರಿಪೂರ್ಣವಾದ ಕಾಗದವು ಎಷ್ಟು ಚಿಕ್ಕದಾಗಿದ್ದರೂ, ಅದರ ತಾತ್ಪರ್ಯವು ಮಹತ್ವವುಳ್ಳದ್ದಾಗಿದ್ಧಿತು; ಆದರೆ ನನ್ನ ಎದೆಯಲ್ಲಿ ಕುದಿಯುತ್ತಿರುವ ಚಿಂತೆಯನ್ನು ಅವಳು ಹೇಗೆ ಅರಿಯುವಳು?

ನಾನಾದರೂ ಒಂದು ಕಾಗದವನ್ನು ಬರೆದೆನು:

"ಮಾತೃತುಲ್ಯಳಾದ ಅತ್ತಿಗೆ!

ನನ್ನೆದೆಯ ನೋವನ್ನು ನಿನಗಲ್ಲದೆ ಇನ್ನಾರಿಗೆ ತಿಳಿಸಲಿ? ಸುಂದರವಾದ ಒಂದು ಹೂವನ್ನು ಕಂಡು, ಅದನ್ನು ಕಿತ್ತು ಎದೆಗೆ ಅಪ್ಪಿಕೊಂಡೆನು. ಆಗ ಆ ಹೂವಿನ ದಂಟಿನಲ್ಲಿದ್ದ ಮುಳ್ಳೊಂದು ನನ್ನ ಎದೆಗೆ ಚುಚ್ಚಿತು. ನಾನು ವಿಚಾರಿಸದೆ ಕೆರೆಯಲ್ಲಿ ನೆಗೆದೆನು.

ಇನ್ನು ಹಳಹಳಿಸಿ ಯಾವ ಪ್ರಯೋಜನವಿದೆ? ಕೆಸರಿನ ಹೊಂಡದಲ್ಲಿಯಾದರೂ ನಿನ್ನ ಸಲಹೆಯಂತೆ ನೆಮ್ಮದಿಯನ್ನು ಹೊಂದಲು ಪ್ರಯತ್ನಿಸುವೆನು

ಆದರೆ ನಾನು ನಿರಪರಾಧಿಯು. ನನ್ನ ಎದೆಯನ್ನು ಸೀಳಲು ಶಕ್ಯವಿದ್ದರೆ, ಆ ರೀತಿ ಸೀಳಿ, ಒಳಗಿರುವುದನ್ನು ನಿನಗೆ ತೋರಿಸುತ್ತಲಿದ್ದೆನು. ನಾನು ಸೌಖ್ಯದಲ್ಲಿದ್ದೇನೆ. ನಿಮ್ಮೆಲ್ಲರ ಕ್ಷೇಮವಾರ್ತೆಯನ್ನು ತಿಳಿಯಲು ಬಯಸುತ್ತೇನೆ.

ನಿನ್ನ

ಶೀನು''

ಕಾಗದಗಳ ಮೂಲಕ ವ್ಯವಹಾರವು ಮುಂದೆ ಸಾಗುತ್ತಲಿದ್ದಿತು. ಹಲವು ಸಾರೆ ಸೀತೆಯನ್ನು ಕುರಿತು ನಾನು ಚಿಂತಿಸುತ್ತಲಿದ್ದೆನು. ಅವಳು ನಿರಪರಾಧಿನಿಯೆಂಬುದಾಗಿ ನನ್ನ ಆತ್ಮವು ಹೇಳುತ್ತಲಿದ್ದಿತು. ಅವಳಿಗೆ ಲೋಕದ ಪರಿಚಯುವಿಲ್ಲ; ನಾನು ಅವಳೊಡನೆ ಆದರ್ಶವನ್ನು ಹಿಡಿದು ಕೊಂಡು, ಕ್ರೂರರೀತಿಯಲ್ಲಿ ವರ್ತಿಸಿದುದುಚಿತವೇ?

ದಿನಗಳು ಕಳೆದುವು. ಬಂದಿತು ಒಂದು ತಂತಿ.

''ಸೀತೆಯು ಹೆತ್ತಳು. ಗಂಡು ಮಗು ತಾಯಿ-ಮಗು ಆರೋಗ್ಯದಲ್ಲಿದ್ದಾರೆ.'' ಎಂಬುದಾಗಿ.

---

## [೧೩]

ಈ ದಿನ ನನ್ನ ಮುದ್ದುಗೂಸು ಅನಂತು ಹುಟ್ಟಿದ ಹಬ್ಬ. ಅದಕ್ಕಾಗಿ ಒಂದು ತಿಂಗಳು ರಜಾ ಪಡೆದುಕೊಂಡು ನಾನು ಊರಿಗೆ ಬಂದಿರುವೆನು ಅತ್ತಿಗೆಯು ವಿಶೇಷ ಸಡಗರದಲ್ಲಿ ಈ ಹಬ್ಬವನ್ನು ನೆರವೇರಿಸಲು ಹೊರಟಿರುವಳು.

ಅನಂತು-ಒಂದು ವರ್ಷಪ್ರಾಯ್ರದ ಈ ಹಸುಳೆಯು-ನಗುವು, ಚೆಲುವು, ತೊದಲ್ನುಡಿಗಳು ನನ್ನ ಎದೆಯಲ್ಲಿ ಹರ್ಷವು ತುಂಬಿ ನದಿಯಾಗಿ ಹರಿಯುವಂತೆ ಮಾಡಿದುವು ಆ ಕಂದನಲ್ಲಿ ನನ್ನ ರೂಪದ ಪ್ರತಿಬಿಂಬವನ್ನು ನಾನು ಕಂಡೆನು. ರಾಮುವು ತಮ್ಮನೆಂದು ಆ ಕಂದನನ್ನು ತೊಟ್ಟಿಲೊಳಗಿಟ್ಟು ಜೋಗುಳ ಹಾಡುತ್ತ ತೂಗುವ ದೃಶ್ಯವನ್ನು ನಾನು ಹೇಗೆ ಮರೆಯಲಿ?

ಸಡಗರದಲ್ಲಿ ಹಬ್ಬವು ಕಳೆಯಿತು. ದಿನಗಳೆರಡು ಗತಿಸಿದುವು. ಒಂದು ದಿನ ಸಂಜೆಯಲ್ಲಿ ನಾನು ಹೂದೋಟದಲ್ಲಿ ಸಂಚರಿಸುತ್ತಿರುವಾಗ ಅತ್ತಿಗೆಯು ನನ್ನ ಹತ್ತಿರ ಬಂದು ಹೇಳಿದಳು: —

''ಶೀನೂ, ನಿನ್ನ ಹಟವಾರಿತನವನ್ನು ಬಿಡು. ಸೀತುವಿನೊಡನೆ ಹರ್ಷವಾಗಿ ಒಂದು ಮಾತನ್ನಾದರೂ ಆಡದೆ ವರ್ಷವೊಂದು ಕಳೆಯಿತು. ನಿನ್ನ ಈ ವರ್ತನೆಯಿಂದ ಅವಳು ಅತ್ಯಂತ ಕೊರಗುತ್ತಿರುವಳು''

"ಅತ್ತಿಗೆ, ನಾನು ಅಪರಾಧಿಯಲ್ಲ; ತಪ್ಪೆಲ್ಲವೂ ಅವಳದು. ಅವಶ್ಯವಿಲ್ಲದೆ ನನ್ನ ಜೀವವನ್ನು ಅವಳು ಹಿಂಡಿದಳು! ನನ್ನ ಸ್ವಭಾವದ ಪರಿಚಯವು ನಿನಗಿದೆಯಷ್ಟೆ? ಯಾವ ಅಪರಾಧವನ್ನೂ ಮಾಡದ ನನ್ನ ಮೇಲೆ ತಪ್ಪನ್ನು ಹೊರಿಸುವುದು ಸಂಕಟಮಯವಾದ ಕೆಲಸವಾಗಿದೆ."

"ಗತಿಸಿದ್ದು ಗತಿಸಿಹೋಯಿತು. ಶೀನೂ, ಮಿಂಚಿದ ಕಾರ್ಯವನ್ನು ಕುರಿತು ಚಿಂತಿಸಿ ಫಲವೇನು? ಈ ಪರಸ್ಪರ ವಿರೋಧದಿಂದ ನಿಮ್ಮ ಬಾಳು ಇನ್ನಿಷ್ಟು ಕಹಿಯಾಗುವದು. ನೀನೆಷ್ಟು ನೊರಗಿ ಹೋಗಿರುವೆಯೆಂಬುದನ್ನು ನಾನು ಬಲ್ಲೆನು; ಅವಳಲ್ಲಿಯೂ ಸಂತೋಷದ ಛಾಯೆಯಿಲ್ಲ. ಒಬ್ಬರ ಹೃದಯವನ್ನು ಇನ್ನೊಬ್ಬರು ಅರಿಯದಿರುವುದರಿಂದ ಈ ಯಾತನೆಗಳು ಸಂಭವಿಸಿದುವು. ನೀನು ನಿನ್ನೆದೆಯನ್ನು ಬಿಚ್ಚಿ ಅವಳಿಗೆ ತೋರಿಸು. ಸ್ವಲ್ಪ ವಿಶಾಲ ಮನಸ್ಸಿನಿಂದ ಕೂಡಿದವನಾಗಿ ಅವಳ ಜೀವನದ ಪಥವನ್ನು ವೀಕ್ಷಿಸು."

"ನೀನು ಏನು ಹೇಳಿದರೂ ಅತ್ತಿಗೆ, ಈ ಬದುಕು ಕೆಸರಿನ ಕೂಪ! ಈ ಸಂಸಾರದಲ್ಲಿ ಶಾಂತಿಯೂ ಲಭಿಸಲಾರದು. ಆದುದರಿಂದ ಸುಖದ ಬಯಕೆಯು ಮನುಷ್ಯನಿಗೆ ಬಿಸಿಲುಗುದುರೆಯಾಗಿರುವದು. ನಾನು ನಿರಪರಾಧಿಯಾಗಿರುವಾಗ, ಅವಳ ಮುಂದೆ ಶಿರವನ್ನು ಬಗ್ಗಿಸಲು ಸಾಧ್ಯವಿಲ್ಲ."

"ನೀನು ಅಪರಾಧಿಯಲ್ಲವೆಂಬುದನ್ನು ನಾನು ಬಲ್ಲೆನು. ಕ್ಷಮಾಯಾಚನೆಯನ್ನು ಮಾಡಲು ನಾನು ಹೇಳುವುದಿಲ್ಲ. ಈ ಶೋಕದ ಬೆಂಕಿಯನ್ನು ಪ್ರೇಮವೆಂಬ ಶೀತಲ ಜಲವನ್ನು ಸಿಂಚಿಸಿ ಆರಿಸಲು ನೀವಿಬ್ಬರೂ ಪ್ರಯತ್ನಿಸತಕ್ಕದ್ದು."

"ಪ್ರೇಮವೆಂಬುದು ಒಂದು ನಿಮಿಷದ ವಿಕಾರವಾಗಿದೆ!"

"ಅದೇಕೆ ಹಾಗೆ ನುಡಿಯುತ್ತಿರುವೆ? ಪ್ರೇಮವೆಂಬುದು ಈ ಬದುಕಿನಲ್ಲಿರುವ ಒಂದು ಅಮೃತ ಬಿಂದುವಾಗಿದೆ."

"ಹಾಗಾಗಿದ್ದರೆ ನನಗೆ ಈ ಬಾಳು ಇಷ್ಟು ಹೇಸಿಗೆಯಾಗಿ ತೋರಲು ಕಾರಣವಿರಲಿಲ್ಲ."

"ಪ್ರೇಮದ ಸ್ವರೂಪವು ನಿನಗರಿಯದು ನಿಮ್ಮಿಬ್ಬರಲ್ಲಿ ತುಂಬಿರುವ ಈ ವಿರೋಧವು ನಿಮ್ಮ ಹೃದಯಾಂತರಾಳದಲ್ಲಿ ಬೆಳಗುತ್ತಿರುವ ಪ್ರೇಮ ಪ್ರಕಾಶನದ ಒಂದು ವಿಪರೀತ ರೂಪವಾಗಿರುತ್ತದೆ. ಅವಳಿಗೆ ನಿನ್ನ ಮೇಲೆ ಎಷ್ಟು ಪ್ರೇಮವಿದೆ ಎಂಬುದನ್ನು ಬಲ್ಲೆಯಾ?"

"ಹೌದು. ಅತ್ತಿಗೆ, ಬೆಕ್ಕಿಗೆ ಇಲಿಯ ಮೇಲಿರುವಷ್ಟು ಪ್ರೇಮವು, ಸವಾರನಿಗೆ ಕುದುರೆಯ ಮೇಲಿರುವಷ್ಟು ಪ್ರೇಮವು ಅವಳಿಗಿದೆ. ಅವಳಲ್ಲಿ ನನ್ನನ್ನು ತನ್ನ ದಾಸನಾಗಿ ಮಾಡಲು ಅವಶ್ಯವಿರುವ ಪ್ರೇಮವಿದೆ!"

"ಶೀನೂ, ನೀನಿಷ್ಟು ಕಠಿನ ಹೃದಯನೆಂದು ನಾನು ಭಾವಿಸಿರಲಿಲ್ಲ. ಕೈಹಿಡಿದ ಹೆಂಡತಿಯನ್ನು ಇಷ್ಟು ಹೀನ ರೀತಿಯಲ್ಲಿ ಭಾವಿಸುವವನು ನೀನೆಂದು ನಾನು ತಿಳಿ

ದಿರಲಿಲ್ಲ!" ಎಂಬುದಾಗಿ ಅತ್ತಿಗೆಯು ತನ್ನ ಕಣ್ಣುಗಳಿಂದ ಆಶ್ಚರ್ಯವನ್ನು ಹೊರ ಸೂಸುತ್ತ ನುಡಿದಳು.

"ಕಠಿಣ ಹೃದಯವಲ್ಲ; ಅವಳ ತಾಡನಗಳಿಂದ ಅದು ಮರದ ಕೊರಡಿನ ಹಾಗೆ ತಣ್ಣಗಾಗಿ ಹೋಗಿದೆ!"

"ಅದರಲ್ಲಿ ಸೌಖ್ಯವನ್ನುಂಟು ಮಾಡು!"

"ಅದು ಸಾಧ್ಯವೆಂದು ತೋರುವುದಿಲ್ಲ."

"ನನ್ನಲ್ಲಿ ನಿನಗೆ ಸ್ನೇಹವಿಲ್ಲವೆ?" ಎಂದು ನಿರಾಶೆಯ ಸ್ವರದಲ್ಲಿ ಅತ್ತಿಗೆಯು ನನ್ನನ್ನು ಪ್ರಶ್ನಿಸಿದಳು.

"ನಿನ್ನನ್ನು ನನ್ನ ತಾಯಿಯೆಂದು ಭಾವಿಸುತ್ತಲಿದ್ದೇನೆ."

"ನಿನ್ನ ಜನನಿಯ ಮಾತುಗಳನ್ನು ನೀನೆಂದಾದರೂ ಮೀರುವೆಯಾ?"

"ಇಲ್ಲ, ಎಂದಿಗೂ ಇಲ್ಲ."

"ಹಾಗಾದರೆ ನನ್ನ ಮಾತನ್ನು ನಡೆಯಿಸು."

"ಆದರೆ–"

"ಆದರೆ-ಗೀದರೆ ಬೇಡ; ನಿನ್ನನ್ನು ಬಾಲ್ಯದಿಂದ ಸಲುಹಿದ ನನ್ನಲ್ಲಿ ಸ್ನೇಹವಿದ್ದರೆ, ಸ್ವಂತ ಮಗನ ಹಾಗೆ ನೋಡುತ್ತಿರುವ ನನ್ನಲ್ಲಿ ಭಕ್ತಿಯಿದ್ದರೆ ನನ್ನ ಈ ಮಾತನ್ನು ಸ್ವೀಕರಿಸು. ನಾವು ಮಾನವ ಜೀವಿಗಳು. ತಪ್ಪು ಮಾಡುವದು ನಮ್ಮ ಸ್ವಭಾವವು. ಆದುದರಿಂದ ಸೀತೆಯನ್ನು ಇಷ್ಟು ಯಾತನೆಗೊಳಿಸುವದುಚಿತವಲ್ಲ. ನನ್ನ ಮಾತನ್ನು ಧಿಕ್ಕರಿಸಬೇಡ"

ಅತ್ತಿಗೆಯ ಮುಖದಲ್ಲಿ ತೋರುತ್ತಿರುವ ದೈನ್ಯತೆಯು ನನ್ನ ಎದೆಯನ್ನು ಸೀಳಿತು. ಬಾಲ್ಯದಿಂದಲೇ ನನ್ನನ್ನು ಸಾಕಿ ಸಲುಹಿದ ನೆನಪು ನನಗೆ ಬಂದಿತು. ಅವಳ ನುಡಿಯನ್ನು ನಾನು ಹೇಗೆ ತಾನೇ ತಿರಸ್ಕರಿಸಲಿ?

"ಅತ್ತಿಗೆ, ನಿನ್ನಾಜ್ಞೆಯನ್ನು ನಾನು ಶಿರಸಾವಹಿಸುವೆನು!" ಎಂದೆನು ನಾನು.

"ಶೀನೂ, ಅವಳೊಡನೆ ಇರುವ ಕೋಪವನ್ನು ಬಿಡು ಪರಸ್ಪರರು ಅರಿತು ಬಾಳಲು ಯತ್ನಿಸಿರಿ" ಎಂದಳು ಅವಳು.

ಅತ್ತಿಗೆಯು ಹೊರಟು ಹೋದಳು. ಹೂದೋಟದಲ್ಲಿ ನಾನೊಬ್ಬನೇ ಸಂಚರಿಸುತ್ತಲಿದ್ದೆನು. ಚಂದ್ರನ ಬೆಳಕು, ಆಕಾಶದಲ್ಲಿ ಪ್ರಕಾಶಿಸುತ್ತಿರುವ ತಾರೆಗಳ ನೋಟ, ಹೂಗಳ ತಂಪು ಇವುಗಳ ರುಚಿಯನ್ನು ನಾನು ಸವಿಯತೊಡಗಿದೆನು. ಕಳೆದ ದಿನಗಳ ನೆನಪು, ನಾನೂ ಅತ್ತಿಗೆಯೂ ಹೂದೋಟವನ್ನು ನೆಟ್ಟು ಬೆಳಸಿದ್ದು, ಸುಬ್ಬುವಿನ ಮೈತ್ರಿ, ನನ್ನ ತುಂಟತನ ಇವುಗಳೆಲ್ಲವೂ ನನ್ನ ಮನಸ್ಸಿನಲ್ಲಿ ಸಿನೇಮಾದಲ್ಲಿ ಕಾಣುವ ಚಿತ್ರಗಳ ಹಾಗೆ ಕಂಡುಬಂದುವು. ಅಂದಿನ ಆ ಆನಂದವನ್ನು ನೆನೆದು ನನ್ನ ಮನಸ್ಸು ಅಸೂಯಾಕುಲವಾಯಿತು. ಈ ಜೀವನದ ದಾರಿಯಲ್ಲಿ ನಾನು ಎಷ್ಟೋ ಮುಂದೆ ಬಂದುಬಿಟ್ಟಿರುವೆನು!

ಈ ರೀತಿ ನಾನು ವಿಚಾರಿಸುತ್ತ ಹೂದೋಟದಲ್ಲಿ ಸಂಚರಿಸುತ್ತಿರುವಾಗ ಸೀತೆಯು ಹೂದೋಟದಲ್ಲಿ ಪ್ರವೇಶಿಸಿದಳು. ಆಕೆಯ ವದನಮಂಡಲದಲ್ಲಿ ಲಜ್ಜೆ, ಅನುತಾಪ, ಕಾತರತೆ ಇವುಗಳು ನರ್ತಿಸುತ್ತಲಿದ್ದವು. ಅವಳ ಮೊಗವನ್ನು ಒಂದು ಬಾರಿ ನೋಡಿದೆನು. ಹಿಂದಿನ ಸುಖವು ಹಿಂದಿರುಗಿ ಬರಲಾರದೆ?-ನನ್ನ ಸೀತೆಯನ್ನು ನಾನು ತಿಳಿಯಲಾರನೆ? ಎಂಬ ಒಂದು ವಾಣಿಯು ನನ್ನ ಎದೆಯಿಂದ ಹೊರಬಿದ್ದಿತು. ಐದು ನಿಮಿಷಗಳ ವರೆಗೆ ಮಾತಾಡಲಿಲ್ಲ ಒಬ್ಬರ ನೇತ್ರಗಳನ್ನು ಒಬ್ಬರು ನೋಡುತ್ತ ನಾವು ಆ ಹೂದೋಟದಲ್ಲಿ ಶಿಲಾಪ್ರತಿಮೆಯಂತೆ ನಿಂತೆವು.

"ಸೀತಾ—"ಎಂದೆನು; ಅದೆಷ್ಟು ಪ್ರೇಮವು ಆ ನುಡಿಗಳಲ್ಲಿ ಹೊರಬಿದ್ದಿತೆಂದು ನಾನು ಹೇಳಲಾರೆನು. ಅವಳ ನೇತ್ರಗಳಿಂದ ಬಾಷ್ಪವು ಹರಿಯಲಾರಂಭಿಸಿತು. ಅದು ಕೋಪದ ಕಣ್ಣೀರಲ್ಲ, ದೌರ್ಬಲ್ಯದ ಬಾಷ್ಪವಲ್ಲ; ಪ್ರೇಮದ-ಅನುತಾಪದ-ಕಂಬನಿಯಾಗಿದ್ದಿತು. ಅವಳ ಅಗಲಿನ ಮುಖಕಮಲವನ್ನು ನೋಡಲು, ನನ್ನಲ್ಲಿ ಮಾಯವಾಗಿದ್ದ ಅನುರಾಗಬೆಂಕಿಯು ಪುನಃ ಉರಿಯಲಾರಂಭಿಸಿತು.

"ನೀನೇಕೆ ಅಳುತ್ತಿರುವೆ?"

"ನಾನು ಅಪರಾಧಿನಿ. ಅನ್ಯಾಯವಾಗಿ ನನ್ನ ಹಟಮಾರಿತನದಿಂದ ನಿಮ್ಮ ಮನಸ್ಸನ್ನು ನೋಯಿಸಿದೆನು. ಈ ಮೂರ್ಖಳನ್ನು ಕ್ಷಮಿಸುವಿರಾ?"

"ಸೀತಾ, ನೀನೇನು ಮಾಡಿದರೂ, ನೀನು ನನ್ನವಳೇ ಅಲ್ಲವೇ? ನನ್ನ ಮುದ್ದಿನ ಸೀತೆಯು ನೀನು!" ಎಂದೆನು ನಾನು. ಐದು ನಿಮಿಷಗಳ ಮುಂಚೆ ಈ ನುಡಿಗಳು ನನ್ನ ಬಾಯಿಂದ ಹೊರಬೀಳಲು ಅಶಕ್ಯವಾಗಿದ್ದುವು; ಆದರೆ ಅತ್ತಿಗೆಯ ಪ್ರಭಾವದಿಂದ ನಾನು ಸೀತೆಯ ನಿಷ್ಕಲಂಕವಾದ ಮನಸ್ಸನ್ನು ಅರಿಯಲು ಈಗ ಸಮರ್ಥನಾದೆನು.

ಅವಳನ್ನು ನಾನು ಅಪ್ಪಿಕೊಂಡು ಅವಳ ಕಣ್ಣುಗಳಿಂದ ಪ್ರವಹಿಸುತ್ತಿರುವ ಕಂಬನಿಕಣಗಳನ್ನು ಒರಸಿದೆನು. "ಸೀತಾ, ಈ ಕೆಸರಿನ ಕೆರೆಯಿಂದ ಈಗ ನಾವಿಬ್ಬರೂ ಪಾರಾಗಲು ಪ್ರಯತ್ನಿಸೋಣ. ನನ್ನ ಅತ್ತಿಗೆಯು ಮುಚ್ಚಿದ್ದ ಕದಗಳನ್ನು ತೆರೆದು ದಾರಿಯನ್ನು ತೋರಿಸಿರುವಳು. ಅವಳ ಚರಣಧೂಲಿಯನ್ನು ಧರಿಸಲು ನಾನು ಯೋಗ್ಯನಲ್ಲ" ಎಂದು, ಅತ್ತಿಗೆಯು ನನ್ನ ಜೀವನದಲ್ಲಿ ತುಂಬಿದ್ದ ವಿಷಾದಮಯ ಕತ್ತಲೆಯನ್ನು ಹೊರದೂಡಿ ಬೆಳಕನ್ನು ನೀಡಿದುದನ್ನೂ, ಅವಳ ಮಾತೃತುಲ್ಯವಾದ ಪವಿತ್ರ ಪ್ರೇಮವನ್ನೂ ಸ್ಮರಿಸುತ್ತ ನಾನು ನುಡಿದೆನು.

"ನನ್ನ ಎದೆಯಲ್ಲಿ ತುಂಬಿದ್ದ ಅಹಂಕಾರ, ಅವಿವೇಕಶೂನ್ಯತೆ ಇವುಗಳನ್ನು ಅಕ್ಕನು ದೂರ ಮಾಡಿದಳು" ಎಂದು ಮೆಲ್ಲನೆ ಮೃದುಸ್ವರದಲ್ಲಿ ಸೀತೆಯು ಅಂದಳು.

"ಕೆಸರಿನ ಕೂಪದಲ್ಲಿರುವ ಆನಂದವನ್ನು ನಾವು ಸವಿಯೋಣ" ಎಂದು ನುಡಿದು, ಸೀತೆಯ ನಡುಗುತ್ತಿರುವ ಅಧರಗಳ ಪಿಯೂಷವನ್ನು ನಾನು ಪಾನ ಮಾಡಿದೆನು.

\+ \+ \+ \+

ಅಷ್ಟರಲ್ಲಿ "ಚಿಕ್ಕಪ್ಪಾ!" ಎಂದು ಕೂಗುತ್ತ ರಾಮುವು ಹೂದೋಟಕ್ಕೆ ಬರುತ್ತಿರುವದು ದೃಗ್ಗೋಚರವಾಯಿತು ಸೀತೆಯು ನನ್ನ ಬಾಹುಗಳ ಬಂಧನದಿಂದ ತಪ್ಪಿಸಿಕೊಂಡು ಮಾಯವಾದಳು.

ನಾನು ರಾಮುವಿನ ಪುಟ್ಟ ಕೈಗಳನ್ನು ಹಿಡಿದುಕೊಂಡು ಆನಂದತಲ್ಲೀನನಾಗಿ ಹೂದೋಟದಲ್ಲಿ ಸಂಚರಿಸಲು ಪ್ರಾರಂಭಿಸಿದೆನು ನನ್ನ ಅತ್ತಿಗೆಯ ಪ್ರಭಾವದಿಂದ ದಿಂದ ನನಗೆ ಹೊಸ ಬಾಳು ಲಭಿಸಿತು.

ಮನೆಯೊಳಗಿನಿಂದ ಸೀತೆಯು ಹಾಡುತ್ತಿರುವ ಈ ಗಾನವು ನನ್ನ ಕರ್ಣೇಂದ್ರಿಯಗಳಲ್ಲಿ ಪ್ರವೇಶಿಸುತ್ತಲಿದೆ:

ಜೀವನವು ಕ್ಷಣ ನೇರದಾ ಬಿಸಿಲಾಗಿರಲು ನೀ-
ನೇಕೆ ಮುಳುಗಿರುವೆ ಚಿಂತೆಯಲಿ? ಹೊಸ ಬಿಸಿ-
ಲಿನಲಿ ಕುಣಿಯೋಣ, ಹಾಡೋಣ ಬಾರೆಲೈ ಗೆಳತಿ!
ಬರಿಯ ಚಿಂತೆಯದೇಕೆ ಎಮಗಿಂದು ಬಾಳಿನಲಿ?

ಸಂಪೂರ್ಣ